


# ಕೊಂಕಣಿ ಲಿಪಿ

## - ದೇವನಾಗರಿ ಏಕೆ?

स्वस्तिश्री शालिवाहन शक १५९७ राक्षस संवत्सर चैत्र शुद्ध १० को
चीराज पाटणी बैसिले रंगभट्ट तथा विनायकपंडित आप्पुभट्ट ते वैद्य
तानिं कोचिचा कुमदोर आंद्रिकि फांडे त्या वानि रोपान ह्या मलबारदेशां
तु आसिले ओषधमात्र वृक्षवालि झाडरवंड ओळखते त्या मनुष्यांकनु
स्तारोदसतु ते ते गांवांतु पेढवून तिंनिं वोरवद आणवून त्या त्या झाडांचें फल
फूल पानबीज समस्ता त्यान्यातु तु कालावरि समपाहून तिंतीचि तारिली त्याउप
रांत आमिं आमगेल्या वैद्यग्रंथाचानि घीराजमणी त्यांत्या ओषधाचे गुण
वाऊनु मता नज्जोज्ञो भुय्या आमका कळेलो नोवा त्यां आरवदांची नावं पळेउनु
आजिदानि वर्ष सकाळि साजे आमिं लागिरावूनु हालिबुस पाहून दिला तेल
टिक अत्रिसाणुंचा कनज अत्रिसाणु आंमि आमचीनिसाणि कर्णु दिली
ते सत्य दाणु मानुवेंजाइ दस्तणु नागर बरपानद्द बरवूनु दिलीं श्रीः

रंगभट्ट | विनायकपंडित | आप्पु वी आप




ಅಖಿಲ ಭಾರತ ಕೊಂಕಣಿ ಪರಿಷತ್

ಪಣಜಿ, ಗೋವಾ

# ಕೊಂಕಣಿ ಲಿಪಿ

## - ದೇವನಾಗರಿ ಏಕೆ?

ಸಂಕಲನ :

ಗೋಕುಲ್‌ದಾಸ್ ಪ್ರಭು

2005




ಅಖಿಲ ಭಾರತ ಕೊಂಕಣಿ ಪರಿಷತ್

ಪಣಜಿ, ಗೋವಾ

# ಮುನ್ನುಡಿ

ಕೊಂಕಣಿಯು ಭಾರತದ ಪ್ರಾಚೀನ ಭಾಷೆಗಳಲ್ಲೊಂದಾಗಿದ್ದು, ಇಂಡೋ-ಆರ್ಯ ಗುಂಪಿನ ಭಾಷೆಗಳಿಗೆ ಸೇರಿದುದಾಗಿದೆ. ಡಾ। ಜೋಸ್ ಪಿರೇರಾ ಮತ್ತು ಡಾ। ಜೆ.ಎಚ್. ಡ ಕುನ್ಹಾ ರಿವೀರಾರಂತಹ ವಿದ್ವಾಂಸರ ಅಭಿಮತದಂತೆ ಕ್ರಿ.ಶ. 1510ರಲ್ಲಿ ಪೋರ್ಚುಗೀಸರು ಗೋವೆಯನ್ನು ವಶಪಡಿಸಿಕೊಂಡು ಅದನ್ನು ತಮ್ಮ ಪೂರ್ವದಿಕ್ಕಿನ ಸಾಮ್ರಾಜ್ಯದ ಮುಖ್ಯ ಠಾಣ್ಯವನ್ನಾಗಿ ಮಾಡುವ ಮೊದಲೇ ಈ ಭಾಷೆಗೆ ದೀರ್ಘವಾದ ಲಿಖಿತ ಸಾಹಿತ್ಯದ ಪರಂಪರೆ ಇತ್ತು. ಗೋವೆಯ ಮೇಲೆ ದಾಳಿ ನಡೆದ ಕೆಲವು ದಶಕಗಳ ನಂತರ ಗೋವೆಯ ಸಮಾಜದ ರಾಷ್ಟ್ರೀಯತ್ವವನ್ನು ನಾಶಪಡಿಸಲು ಕೈಗೊಂಡ ವ್ಯವಸ್ಥಿತ ಪ್ರಕ್ರಿಯೆಯಲ್ಲಿ ಸ್ವದೇಶೀಯ ಪುಸ್ತಕಗಳನ್ನು ಮತ್ತು ಸಾಹಿತ್ಯದ ಹಸ್ತಪ್ರತಿಗಳನ್ನು ವಶಪಡಿಸಿಕೊಂಡು ಸುಟ್ಟು ಹಾಕಲಾಯಿತು ಮತ್ತು ಈ ರೀತಿಯಲ್ಲಿ ಪೋರ್ಚುಗೀಸರ ಕಾಲಕ್ಕಿಂತಲೂ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಕೊಂಕಣಿ ಭಾಷೆ ಅಥವಾ ಸಾಹಿತ್ಯದ ಎಲ್ಲ ಸಾಕ್ಷ್ಯಗಳನ್ನು ನಾಶಪಡಿಸಲಾಯಿತು ಎನ್ನುವುದಕ್ಕೆ ಅನೇಕ ಐತಿಹಾಸಿಕ ಪುರಾವೆಗಳಿವೆ. ಆದರೆ ಅದೃಷ್ಟವಶಾತ್ ಮಹಾಭಾರತ ಹಾಗೂ ರಾಮಾಯಣಗಳಿಂದ ಆಯ್ದ ಕತೆಗಳನ್ನು ಹೇಳುವ ಕೆಲವು ಕೊಂಕಣಿ ಹಸ್ತಪ್ರತಿಗಳು ಇನ್ನೂ ಉಳಿದುಕೊಂಡಿದ್ದು, ಪೋರ್ಚುಗೀಸರ ಆಗಮನಕ್ಕಿಂತಲೂ ಮೊದಲು ಗೋವೆಯಲ್ಲಿ ಚಾಲ್ತಿಯಲ್ಲಿರಬಹುದಾದಂತಹ ಕೊಂಕಣಿ ಭಾಷೆಯ ಸ್ವರೂಪ ಮತ್ತು ಅದರ ಸಾಹಿತ್ಯ ಪ್ರಕಾರದ ಮೇಲೆ ಬೆಳಕು ಚೆಲ್ಲುತ್ತದೆ. ಈ ಸಾಹಿತ್ಯವು ದೇವನಾಗರಿ ಲಿಪಿಯಲ್ಲಿ ಬರೆಯಲ್ಪಟ್ಟಿದೆ ಎಂಬುದನ್ನು ನಾವು ಖಚಿತವಾಗಿ ಹೇಳಬಹುದಾಗಿದೆ.

ಕ್ರಿ.ಶ. ಹದಿನಾರನೇ ಮತ್ತು ಹದಿನೇಳನೇ ಶತಮಾನಗಳಲ್ಲಿ ಗೋವೆಯ ಕುಪ್ರಸಿದ್ಧ ಸರಕಾರಿ ವಿಚಾರಣೆಯೂ ಸೇರಿದಂತೆ ಅನೇಕ ಕಾರಣಗಳಿಗಾಗಿ ಕೊಂಕಣಿ ಭಾಷಿಕರು ಬಹುಸಂಖ್ಯೆಯಲ್ಲಿ ತಮ್ಮ ತಾಯ್ನಾಡನ್ನು ತೊರೆದು ಹೋಗಬೇಕಾಯಿತು. ಅವರು ಈಗಿನ ಉತ್ತರ ಭಾರತ, ನೆರೆಯ ಕರ್ನಾಟಕ ಮತ್ತು ತೀರ ದಕ್ಷಿಣದಲ್ಲಿರುವ ಕೇರಳ ರಾಜ್ಯದ ಪ್ರದೇಶಗಳಿಗೆ ವಲಸೆ ಹೋದರು. ಆಗಿನ ಕಾಲದ ಸಮಾಜೋ-ಆರ್ಥಿಕ ಆಯ್ಕೆಗಳು, ರಾಜಕೀಯ ಅನಿವಾರ್ಯತೆಗಳು, ಧಾರ್ಮಿಕ ಪರಿಸ್ಥಿತಿಗಳು ಹಾಗೂ ಭೌಗೋಳಿಕ ದೂರ, ದೇಶದ ವಿವಿಧ ಭಾಗಗಳಲ್ಲಿ ನೆಲೆಯೂರಿದ ಕೊಂಕಣಿ ಭಾಷಿಕರು ಪರಸ್ಪರ ಸಂಪರ್ಕವನ್ನಿರಿಸಿಕೊಳ್ಳುವುದನ್ನು ತಡೆಗಟ್ಟಿರಬೇಕು. ಕಾಲಾಂತರದಲ್ಲಿ ತಮ್ಮ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಉಳಿವು ಹಾಗೂ ಯಶಸ್ಸಿಗಾಗಿ ಸ್ಥಳೀಯ ಸಾಮಾಜಿಕ ಸನ್ನಿವೇಶದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವುದು ಅವರಿಗೆ ಅನಿವಾರ್ಯವಾಯಿತು. ಈ ಪ್ರಕ್ರಿಯೆಯಲ್ಲಿ ಕೊಂಕಣಿ ಸಮುದಾಯದ ಅಧಿಕಾಂಶ ಜನರಿಗೆ ತಮ್ಮ ಮಾತೃಭಾಷೆಯ ಬಗೆಗಿನ ಸ್ವಾಭಿಮಾನ ಹಾಗೂ ಅದರ ಅಭಿವೃದ್ಧಿಯ ಬಗೆಗಿನ ಕಾಳಜಿ ಕೊನೆಯ ಆದ್ಯತೆಯಾಯಿತು. ಕೊಂಕಣಿಯನ್ನು ಬರೆಯಲು ಅನೇಕ ಲಿಪಿಗಳ ಬಳಕೆ ಇಂತಹ ಒಂದು ಪ್ರಕ್ರಿಯೆಯ ಅನುಚಿತ ಕೊಡುಗೆಯಾಯಿತು.

ಕೊಂಕಣಿಗರಲ್ಲಿ ತಮ್ಮ ಮಾತೃಭಾಷೆಯ ಬಗ್ಗೆ ಪ್ರೀತ್ಯಾದರಗಳನ್ನುಂಟುಮಾಡಿ, ಅವರಲ್ಲಿ ಕೊಂಕಣಿ ಸ್ವಾಭಿಮಾನವನ್ನು ಜಾಗೃತಗೊಳಿಸಿ, ಅವರನ್ನು ಒಂದುಗೂಡಿಸುವ ಪ್ರಯತ್ನಗಳು

ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳಲ್ಲಿ ರೂಪು ತಳೆಯ ತೊಡಗಿದವು. ಶೆಣ್ಯೆ ಗೊಂಯ್‌ಬಾಬ್‌ರವರು ತಮ್ಮ ಬರೆವಣಿಗೆಯಲ್ಲಿ ಕೊಂಕಣಿ ಜನರ ಭವ್ಯ ಪರಂಪರೆಯನ್ನು ಚಿತ್ರಿಸಿ, ಕೊಂಕಣಿಯನ್ನು ಒಂದು ಆಧುನಿಕ ಭಾಷೆಯಾಗಿ ಪ್ರಚಾರ ಮಾಡಿ, ಈ ಸಮುದಾಯದವರಲ್ಲಿ ಆತ್ಮಾಭಿಮಾನದ ಸೆಲೆಯನ್ನುಕ್ಕಿಸಿ, ಎಲ್ಲ ಕೊಂಕಣಿ ಭಾಷಿಕರಲ್ಲಿ ತಾವೆಲ್ಲ ಒಂದು ಎಂಬ ಒಮ್ಮತದ ಭಾವ ಮೂಡಬೇಕೆಂದು ಕರೆ ಇತ್ತರು. ಮಾಧವ ಮಂಜುನಾಥ ಶ್ಯಾನುಭಾಗರು ಎಲ್ಲ ಕೊಂಕಣಿಗರನ್ನು ಒಂದೇ ವೇದಿಕೆಯ ಮೇಲೆ ತರುವ ವಿಚಾರಗಳಿಗೆ ಚಾಲನೆ ಕೊಟ್ಟರು. ಪರಿಣಾಮ ಸ್ವರೂಪ ಜುಲೈ 1939ರಲ್ಲಿ ಕಾರವಾರದಲ್ಲಿ ಕೊಂಕಣಿ ಪರಿಷತ್ತು ಜನ್ಮತಳೆಯಿತು.

ಕೊಂಕಣಿ ಪರಿಷತ್ತಿನ ಧ್ಯೇಯೋದ್ದೇಶಗಳು ಇಂತಿದ್ದವು:

1. ಕೊಂಕಣಿ ಭಾಷಿಕರು ಎಲ್ಲಿಯೇ ವಾಸಿಸುತ್ತಿರಲಿ, ಅವರಲ್ಲಿ ಏಕತೆಯ ಭಾವವನ್ನು ಪ್ರೋತ್ಸಾಹಿಸಿ ಸಾಂಸ್ಕೃತಿಕ ಏಕತೆಯನ್ನು ಪುನ: ಸ್ಥಾಪಿಸುವುದು.
2. ಕೊಂಕಣಿಯ ಭವ್ಯತೆ ಹಾಗೂ ಶ್ರೇಷ್ಠತೆಯ ಬಗ್ಗೆ ವಿಶ್ವದಾದ್ಯಂತ ಜನರಲ್ಲಿ ತಿಳಿವಳಿಕೆಯನ್ನುಂಟುಮಾಡುವುದು ಮತ್ತು ಈ ಭಾಷೆಯ ಬಗ್ಗೆ ಇರುವ ಎಲ್ಲ ತಪ್ಪು ತಿಳಿವಳಿಕೆ ಹಾಗೂ ಮಿಥ್ಯಾಕಲ್ಪನೆಗಳನ್ನು ಹೋಗಲಾಡಿಸುವುದು.
3. ಕೊಂಕಣಿ ಭಾಷೆಯ ವಿವಿಧ ಒಳಭೇದಗಳಲ್ಲಿರುವ ಭಾಷಾ ಏಕತೆಯನ್ನು ಗುರುತಿಸಿ ಅದನ್ನು ವಿಕಸಿತಗೊಳಿಸುವುದು ಮತ್ತು ಕ್ರಮೇಣ ಅದನ್ನು ಪ್ರಮಾಣೀಕರಿಸುವುದು.
4. ಕೊಂಕಣಿ ಭಾಷೆಯ ಮೂಲ ಲಿಪಿಯಾದ ದೇವನಾಗರಿಯ ಬಳಕೆಯನ್ನು ಪ್ರಚಾರ ಮಾಡುವುದು.
5. ಕೊಂಕಣಿ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗೆ ಪ್ರಚಾರ ನೀಡುವುದು.

ಕಳೆದ ಆರು ದಶಕಗಳಲ್ಲಿ ಕೊಂಕಣಿ ಪರಿಷತ್ತು ತನ್ನ ವರ್ಚಸ್ಸನ್ನು ಹಿಗ್ಗಿಸಿಕೊಂಡು ಅಖಿಲ ಭಾರತ ಕೊಂಕಣಿ ಪರಿಷತ್ ಆಗಿ ಬೆಳೆದು ಈ ಉದ್ದೇಶಗಳ ಸಾಧನೆಗಾಗಿ ಸಾಕಷ್ಟು ಶ್ರಮಿಸಿದೆ. ಕೊಂಕಣಿಯು ಒಂದು ಸ್ವತಂತ್ರ ಭಾಷೆಯ ಮಾನ್ಯತೆ ಗಳಿಸುವಲ್ಲಿ, 1987ರಲ್ಲಿ ಆ ಭಾಷೆಗೆ ಗೋವಾ ರಾಜ್ಯದ ಆಡಳಿತ ಭಾಷೆಯ ಪಟ್ಟವನ್ನು ದೊರಕಿಸಿಕೊಡುವಲ್ಲಿ, ಗೋವೆಗೆ ಪ್ರತ್ಯೇಕ ರಾಜ್ಯದ ಸ್ಥಾನಮಾನವನ್ನು ಕೊಡಿಸುವಲ್ಲಿ, ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಕೊಂಕಣಿಯನ್ನು ದೇಶದ ಸಂವಿಧಾನದ ಎಂಟನೇ ಅನುಸೂಚಿಯಲ್ಲಿ ಸೇರಿಸುವಲ್ಲಿ, ದಶಕಗಳಿಂದ ಕೊಂಕಣಿ ಪರಿಷತ್ತು ಪ್ರಚಾರ ಮಾಡಿದ ವಿಚಾರಗಳಿಂದ ಸ್ಫೂರ್ತಿ ಪಡೆದ ಸಾವಿರಾರು ಕೊಂಕಣಿ ಪ್ರೇಮಿಗಳ ಅವಿರತ ಪ್ರಯತ್ನ ಮತ್ತು ತ್ಯಾಗಗಳಿವೆ. ಕಳೆದ ಮೂರು ದಶಕಗಳಿಂದ ನಡೆಯುತ್ತಿರುವ ಪರಿಷತ್ತಿನ ನಿರಂತರ ಯತ್ನಗಳು ಫಲ ನೀಡತೊಡಗಿವೆ.

ಈಗ ಕೆಲವು ವಿನಾಶಕಾರಿ ಶಕ್ತಿಗಳು ತಲೆ ಎತ್ತ ತೊಡಗಿದ್ದು ಅಮಾಯಕ ಕೊಂಕಣಿಗರನ್ನು ಹಾಗೂ ಇತರ ಭಾಷೆಗಳನ್ನಾಡುವ ಜನರನ್ನು ತಪ್ಪು ಹಾದಿಗೆಳೆಯತೊಡಗಿವೆ. ಯಾವುದಕ್ಕೂ ಹೇಸದ ಈ ವಿಚ್ಛಿದ್ರಕಾರಿ ಶಕ್ತಿಗಳು ಪೋರ್ಚುಗೀಸರ ಆಗಮನದ ಮೊದಲು ಕೊಂಕಣಿ ಸಾಹಿತ್ಯ ಇರಲಿಲ್ಲ,

ದೇವನಾಗರಿ ಲಿಪಿ ಕೊಂಕಣಿಗೆ ಸೂಕ್ತವಲ್ಲ - ಎಂಬಿತ್ಯಾದಿ ಸುಳ್ಳುಗಳನ್ನು ಸೃಷ್ಟಿಸುತ್ತಿವೆ ಮತ್ತು ಅವುಗಳನ್ನು ಹರಡುತ್ತಿವೆ.

ದಿನನಿತ್ಯವೆಂಬಂತೆ ಲಿಪಿಯ ಸಮಸ್ಯೆಯ ಬಗೆಗಿನ ಇವರ ಮಿಥ್ಯಾವಾದಗಳ ಸುಳಿಗೆ ಸಿಲುಕಿಕೊಂಡಿರುವ ಕೊಂಕಣಿಗರಿಗೆ ದಿಕ್ಕು ತೋಚದಂತಾಗಿರುವುದು ಸ್ವಾಭಾವಿಕವೇ ಆಗಿದೆ. ಆದುದರಿಂದಲೇ ಇದನ್ನು ಸರಿಪಡಿಸಲು ಅಖಿಲ ಭಾರತ ಕೊಂಕಣಿ ಪರಿಷತ್ತಿಗೆ ಮಧ್ಯೆ ಪ್ರವೇಶಿಸುವುದು ಅನಿವಾರ್ಯವಾಗಿದೆ. ಅದರಂತೆ ನಮ್ಮವರಲ್ಲೇ ಕೆಲವರು ಹರಡಿದ ತಪ್ಪು ತಿಳಿವಳಿಕೆ ಹಾಗೂ ಸುಳ್ಳು ಕಲ್ಪನೆಗಳನ್ನು ಹೋಗಲಾಡಿಸಲು ಪರಿಷತ್ತು ಈ ಕಿರು ಪುಸ್ತಕವನ್ನು ಹೊರತರುತ್ತಿದೆ.

ಪರಿಷತ್ತಿನ ಕಾರ್ಯದರ್ಶಿಗಳಾಗಿರುವ ಶ್ರೀ ಗೋಕುಲದಾಸ ಪ್ರಭುಗಳು ವಾಸ್ತವಾಂಶಗಳನ್ನು ಸಂಗ್ರಹಿಸಿ ಓದುಗನಿಗೆ ಅನುಕೂಲವಾಗುವಂತೆ ಪ್ರಸ್ತುತಪಡಿಸಿದ್ದಾರೆ. ಈ ವಿಷಯದಲ್ಲಿ ನಡೆದ ಚರ್ಚೆಯಲ್ಲಿ ಎತ್ತಲ್ಪಟ್ಟ ವಿವಿಧ ಪ್ರಶ್ನೆಗಳ ಬಗ್ಗೆ ಈ ಕಿರು ಹೊತ್ತಗೆ ಬೆಳಕು ಚೆಲ್ಲುತ್ತದೆ. ಲಿಪಿಯ ಸಮಸ್ಯೆಗೆ ಸಂಬಂಧಿಸಿದ ಎಲ್ಲಾ ಆಯಾಮಗಳನ್ನು ಸಂಕ್ಷಿಪ್ತವಾಗಿ ಪ್ರಸ್ತುತಪಡಿಸುವ ಪ್ರಾಮಾಣಿಕ ಪ್ರಯತ್ನ ಇದಾಗಿದೆ. ಈ ಸಮಸ್ಯೆಯಲ್ಲಿ ಒಳಗೊಂಡ ಎಲ್ಲ ವಿಚಾರಗಳನ್ನು ವಿಶ್ಲೇಷಿಸಿ, ದೇವನಾಗರಿ ಲಿಪಿಯ ವಿರುದ್ಧ ಮಾಡಲ್ಪಟ್ಟಿರುವ ಅನೇಕ ವಾದಗಳು ವಾಸ್ತವಾಂಶಗಳ ನೆಲೆಗಟ್ಟಿಲ್ಲದೆ ತರ್ಕಹೀನವಾಗಿವೆ ಎಂಬುದನ್ನು ಸಾಬೀತುಪಡಿಸುತ್ತದೆ. ಈ ಪುಸ್ತಕದ ಮೂಲಕ ಯಾವ ಪರಿಸ್ಥಿತಿಗಳಿಂದಾಗಿ ಕೊಂಕಣಿಯು ಬೇರೆ-ಬೇರೆ ಲಿಪಿಗಳಲ್ಲಿ ಬರೆಯಲ್ಪಡುವಂತಾಯಿತು? ಬಹುಲಿಪಿಗಳ ಬಳಕೆಯಿಂದ ಉಂಟಾಗುವ ತೊಡಕುಗಳೇನು? ಒಂದು ಸಾಮಾನ್ಯ ಲಿಪಿಯ ಅಗತ್ಯವಿದೆಯೇ ಮತ್ತು ಅಂತಹ ಲಿಪಿಗೆ ಪ್ರೋತ್ಸಾಹ ನೀಡುವುದು ಸಾಧ್ಯವೇ ಹಾಗೂ ಯಾವ ಉದ್ದೇಶ ಸಾಧನೆಗಾಗಿ ಹಾಗೆ ಮಾಡಬೇಕು? ಸಾಮಾನ್ಯ ಲಿಪಿಯೊಂದು ಅಗತ್ಯವೆಂದಾದಲ್ಲಿ ಅಂತಹ ಒಂದು ಯೋಗ್ಯತೆಯುಳ್ಳ ಲಿಪಿ ಯಾವುದು ಮತ್ತು ಅದನ್ನು ಹೇಗೆ ಸ್ವೀಕಾರಾರ್ಹಗೊಳಿಸಬಹುದು? - ಇವೇ ಮೊದಲಾದ ತನ್ನ ಪ್ರಶ್ನೆ ಅಥವಾ ಸಂದೇಹಗಳಿಗೆ ಓದುಗನು ಉತ್ತರಗಳನ್ನು ಕಂಡುಕೊಳ್ಳಬಹುದು.

ಈ ಪುಸ್ತಕವು ಕೊಂಕಣಿ ಮಾತನಾಡುವ ಜನರ ಮನಸ್ಸಿನಲ್ಲಿರುವ ಎಲ್ಲ ಗೊಂದಲಗಳನ್ನು ನಿವಾರಿಸುವುದು ಮತ್ತು ಎಲ್ಲ ಕೊಂಕಣಿ ಪ್ರೇಮಿಗಳಿಗೆ, ವಿಶೇಷವಾಗಿ ಶಾಲಾ-ಕಾಲೇಜುಗಳಿಗೆ ಹೋಗುವ ವಿದ್ಯಾರ್ಥಿಗಳು ಮತ್ತಿತರ ಯುವಜನರಿಗೆ ತಮ್ಮ ಮಾತೃಭಾಷೆಯಾದ ಕೊಂಕಣಿ, ಅದರ ಲಿಪಿ ಮತ್ತು ಸಾಹಿತ್ಯಗಳ ಕುರಿತು ಸ್ಪಷ್ಟವಾದ ಚಿತ್ರಣವನ್ನು ನೀಡುವುದು ಎಂಬ ಭರವಸೆ ನನಗಿದೆ.

*ಜೈ ಕೊಂಕಣಿ!*

**ಬಸ್ತಿ ವಾಮನ ಶೆಣೈ**

ಅಧ್ಯಕ್ಷರು

ಅಖಿಲ ಭಾರತ ಕೊಂಕಣಿ ಪರಿಷತ್

# I

# ಕೊಂಕಣಿ ಲಿಪಿ - ಒಂದು ಚಾರಿತ್ರಿಕ ನೋಟ

## 1. ಕೊಂಕಣಿಯು ಲಿಪಿಯಿಲ್ಲದ ಒಂದು ಭಾಷೆಯೆ?

ಕೊಂಕಣಿ ಭಾಷೆಗೆ ಮಲಯಾಳ, ತಮಿಳು, ಕನ್ನಡ, ಗುಜರಾತಿ, ಬಂಗಾಳಿ ಭಾಷೆಗಳಿಗಿದ್ದಂತೆ ಒಂದು ಪ್ರತ್ಯೇಕವಾದ ಲಿಪಿಯೆಂಬುದು ಇಲ್ಲ. ಆದರೆ ಒಂದು ಭಾಷೆಯ ಅಸ್ತಿತ್ವವು, ಅದರದ್ದೇ ಆದ ಒಂದು ಲಿಪಿಯನ್ನು ಹೊಂದಿರುವುದನ್ನಷ್ಟೇ ಅವಲಂಬಿಸಿಲ್ಲ. ಹಲವಾರು ಭಾಷೆಗಳು ಒಂದೇ ಲಿಪಿಯನ್ನು ಹಂಚಿಕೊಂಡಿವೆ. ಉದಾಹರಣೆಗೆ ಇಂಗ್ಲಿಷ್, ಫ್ರೆಂಚ್, ಜರ್ಮನ್‌ಗಳಲ್ಲದೆ ಹೆಚ್ಚು ಕಡಿಮೆ ಇತರ ಎಲ್ಲ ಐರೋಪ್ಯ ಭಾಷೆಗಳು ಹಾಗೂ ಜಗತ್ತಿನ ಇನ್ನಿತರ ಹಲವಾರು ಭಾಷೆಗಳು ಒಂದೇ ಲಿಪಿಯನ್ನು ಬಳಸುತ್ತಿವೆ - ಅದೇ ರೋಮನ್ ಲಿಪಿ. ಭಾರತದಲ್ಲಿ, ಜನಸಾಮಾನ್ಯರು ಹಿಂದಿ ಲಿಪಿಯೆಂದು ಗುರುತಿಸುವ ದೇವನಾಗರಿ ಲಿಪಿಯು ವಾಸ್ತವವಾಗಿ ಸಂಸ್ಕೃತ ಹಾಗೂ ಪ್ರಾಕೃತ ಭಾಷೆಗಳ ಲಿಪಿಯಾಗಿ ಬಳಸಲ್ಪಡುತ್ತಿತ್ತು. ಈ ದೇವನಾಗರಿಯು ಆಧುನಿಕ ಭಾರತೀಯ ಭಾಷೆಗಳಾದ ಭೋಜಪುರಿ, ಕೊಂಕಣಿ, ಮರಾಠಿ, ನೇಪಾಳಿ, ರಾಜಸ್ಥಾನೀ, ಸಿಂಧಿ ಮುಂತಾದ ಭಾಷೆಗಳ ಲಿಪಿಯೂ ಆಗಿದೆ. ಪ್ರತ್ಯೇಕವಾದ ಲಿಪಿಯ ಕೊರತೆಯಿಂದ ಯಾವುದೇ ಭಾಷೆಯು ತನ್ನ ಮಹತ್ವವನ್ನು ಕಳೆದುಕೊಳ್ಳುವುದೂ ಇಲ್ಲ ಅಥವಾ ಅದರಿಂದ ಆ ಭಾಷೆಯ ಬೆಳವಣಿಗೆಗೆ ತೊಡಕು ಉಂಟಾಗುವುದೂ ಇಲ್ಲ.

## 2. ಶಾಸನಗಳಲ್ಲಿ ಹಾಗೂ ಪುಸ್ತಕಗಳಲ್ಲಿ ಕೊಂಕಣಿಗೆ ದೇವನಾಗರಿ ಲಿಪಿಯ ಬಳಕೆ.

(ಅ) ಶ್ರವಣಬೆಳಗೊಳದ ಬಾಹುಬಲಿಯ ಬೃಹತ್ ಶಿಲ್ಪದ ಪದತಲದಲ್ಲಿರುವ ಶಾಸನದಲ್ಲಿರುವ ಎರಡು ಸಾಲುಗಳು ಇಂತಿವೆ: (೧) **ಶ್ರೀ ಚಾಮುಂಡರಾಜೇ ಕರವಿಯಲೆ** ಮತ್ತು (೨) **ಶ್ರೀ ಗಂಗರಾಜೇ ಸುತ್ತಾಳೆ ಕರವಿಯಲೆ**. ಮೊದಲ ಸಾಲು ಸುಮಾರು ಕ್ರಿ.ಶ. 981ರಲ್ಲಿ ಕೆತ್ತಲ್ಪಟ್ಟಿದ್ದರೆ, ಎರಡನೆಯ ಸಾಲು ಕ್ರಿ.ಶ. 1116-17ರಲ್ಲಿ ಕೆತ್ತಲ್ಪಟ್ಟಿದೆ. ನಾಗಪುರ ವಿಶ್ವವಿದ್ಯಾಲಯದ ಮರಾಠಿ ವಿಭಾಗದ ಮಾಜಿ ಮುಖ್ಯಸ್ಥರಾದ ದಿವಂಗತ ಡಾ। ಎಸ್.ಬಿ. ಕುಲಕರ್ಣಿಯವರ ಹಾಗೂ ಡಾ। ಜೋಸ್ ಪಿರೇರಾ ('ಕೊಂಕಣಿ ಮಂದಾಕಿನಿ' ಪೊರ್‌ವೊರಿನ್ ಗೋವಾ, 1996, ಪು. 10)ರವರ ಪ್ರಕಾರ ಈ ಎರಡೂ ಸಾಲುಗಳ ಭಾಷೆ ಕೊಂಕಣಿಯಾಗಿದೆ.

(ಆ) ಅಪ್ಪು ಭಟ್ಟ, ರಂಗ ಭಟ್ಟ ಮತ್ತು ವಿನಾಯಕ ಭಟ್ಟ ಮೊದಲಾದವರ ಕೊಂಕಣಿಯ ಬಗೆಗಿನ ಸಾಕ್ಷ್ಯಗಳು ಹಾಗೂ ಕ್ರಿ.ಶ. 1678 ಮತ್ತು ಕ್ರಿ.ಶ. 1963ರ ಮಧ್ಯಾವಧಿಯಲ್ಲಿ ಪ್ರಕಟವಾದ **"ಹೊರ್ತೂಸ್ ಇಂಡಿಕಸ್ ಮಲಬರಿಕಸ್"** ಎಂಬ 12 ಸಂಪುಟಗಳ ಪುಸ್ತಕದಲ್ಲಿ ಸಸ್ಯಗಳ ವಿವಿಧ ಭಾಗಗಳಿಗೆ ನೀಡಿರುವ ಕೊಂಕಣಿ ಶಬ್ದಗಳು ದೇವನಾಗರಿ ಲಿಪಿಯಲ್ಲಿವೆ.

## 3. ಹಲವಾರು ಶತಮಾನಗಳಿಂದ ಕೊಂಕಣಿಯನ್ನು ಇನ್ನಿತರ ಲಿಪಿಗಳಲ್ಲಿ ಬರೆಯುತ್ತಿದ್ದುದು ನಿಜವೆ?

ಹೌದು. ಹಲವಾರು ಕೊಂಕಣಿ ಶಾಸನಗಳು ಹಾಗೂ ಚಾರಿತ್ರಿಕ ದಾಖಲೆಗಳು ಹಳೆಗನ್ನಡ ಲಿಪಿಯಲ್ಲಿವೆ. ಭಾರತೀಯ ಚರಿತ್ರೆಯಲ್ಲಿ ಭಾಷೆ ಹಾಗೂ ಲಿಪಿಗಳ ಮಧ್ಯೆ ಕಟ್ಟುನಿಟ್ಟಿನ

ಸಂಬಂಧಗಳೆಂದೂ ಇದ್ದಿರಲಿಲ್ಲ. ಆದ್ದರಿಂದ ಸಂಸ್ಕೃತ ಹಾಗೂ ಪ್ರಾಕೃತ ಶಾಸನಗಳು ಬ್ರಾಹ್ಮಿ ಶಾರದಾ, ಮೋಡಿ ಹಾಗೂ ದೇವನಾಗರಿ ಲಿಪಿಗಳಲ್ಲಿ ಕಾಣಸಿಗುತ್ತವಾದರೆ ಮಲಯಾಳ ಭಾಷೆಯು ಈಗಿನ ಆಧುನಿಕ ಲಿಪಿಯನ್ನು ತನ್ನದಾಗಿಸಿಕೊಳ್ಳುವ ಮೊದಲು ಆ ಭಾಷೆಯ ಶಾಸನಗಳು ತಮಿಳು, ವಟ್ಟೆಶ್ಯುತ್ತು ಹಾಗೂ ಕೊಳಶ್ಯುತ್ತು ಲಿಪಿಗಳಲ್ಲಿರುವುದು ಕಾಣಸಿಗುತ್ತದೆ. ಹಾಗೆಯೇ ಈಗಿನ ತಮಿಳು ಲಿಪಿ ಅಸ್ತಿತ್ವಕ್ಕೆ ಬರುವ ಮೊದಲಿನ ಹಳೆಯ ತಮಿಳು ಶಾಸನಗಳು ತಮಿಳು ಬ್ರಾಹ್ಮಿ ಮತ್ತು ಹಳೆಯ ತಮಿಳು ಲಿಪಿಗಳಲ್ಲಿರುವುದು ಕಂಡು ಬರುತ್ತದೆ.

ಮೇಲೆ ತಿಳಿಸಿರುವಂತೆ ಕೊಂಕಣಿ ಭಾಷೆಯ ಮೊತ್ತ ಮೊದಲ ಶಾಸನಗಳು ದೇವನಾಗರಿ ಲಿಪಿಯಲ್ಲಿವೆ. ಕಾಲಾನುಕ್ರಮದಲ್ಲಿ ಗೋವಾದಲ್ಲಿ ವಿದೇಶೀ ಅರಸರ ಆಳ್ವಿಕೆಯಿಂದಾಗಿ ಕೊಂಕಣಿ ಶಾಸನಗಳು ಇತರ ಲಿಪಿಗಳಲ್ಲಿಯೂ ಬರೆಯಲ್ಪಟ್ಟವು.

4. **ಇತರ ಭಾಷೆಗಳು ತಮ್ಮದೇ ಆದ ಲಿಪಿಯನ್ನು ಹೊಂದಿವೆ. ಆದರೆ ಕೊಂಕಣಿ ಭಾಷೆಯನ್ನು ಬೇರೆ ಬೇರೆ ರಾಜ್ಯಗಳಲ್ಲಿ ವಿವಿಧ ಲಿಪಿಗಳಲ್ಲಿ ಏಕೆ ಬರೆಯಲಾಗುತ್ತದೆ?**

ಹಲವಾರು ಶತಮಾನಗಳ ನಿರಂತರ ಪ್ರಯೋಗದಿಂದಷ್ಟೇ ಭಾಷೆ ಹಾಗೂ ಲಿಪಿಯ ನಡುವಿನ ಸಂಬಂಧವು ವಿಕಸಿತಗೊಳ್ಳುತ್ತದೆ. ಕೊಂಕಣಿಯ ಬಗ್ಗೆ ಹೇಳುವುದಾದರೆ ದೇವನಾಗರಿ ಲಿಪಿಯೊಂದಿಗೆ ಅದಕ್ಕಿದ್ದ ನಂಟು ಸುಗಮವಾಗಿ ಮುಂದುವರಿಯಲು ಅನೇಕ ಅಡ್ಡಿ-ಆತಂಕಗಳು ಉಂಟಾದವು. ಉದಾಹರಣೆಗೆ - (i) ಆಳರಸರಿಂದ ಅಧಿಕೃತ ಪ್ರೋತ್ಸಾಹದ ಕೊರತೆ (ii) ಗೋವಾಕ್ಕೆ ಕ್ರಿಶ್ಚಿಯನ್ ಮಿಶನರಿಗಳ ಆಗಮನ. ಅವರಿಂದ ದೇವನಾಗರಿ ಲಿಪಿಯಲ್ಲಿದ್ದ ಕೊಂಕಣಿ ಪುಸ್ತಕ / ಸಾಹಿತ್ಯಗಳ ನಾಶ ಹಾಗೂ ಕಾಲಕ್ರಮೇಣ ಕೊಂಕಣಿಗೆ ರೋಮನ್ ಲಿಪಿಯ ಬಳಕೆ. (iii) ಕೊಂಕಣಿ ಭಾಷೆಯನ್ನಾಡುವವರು ಕರ್ನಾಟಕ ಹಾಗೂ ಕೇರಳ ರಾಜ್ಯಗಳಿಗೆ ವಲಸೆ ಹೋಗಿ ಅಲ್ಲಿ ಭಾಷಾ ಅಲ್ಪಸಂಖ್ಯಾತರಾಗಿ ಆಯಾಯ ರಾಜ್ಯಗಳ ಪ್ರಮುಖ ಭಾಷೆಗಳಿಂದ ಪ್ರಭಾವಿತರಾದುದು. (iv) ಹತ್ತೊಂಬತ್ತನೆಯ ಶತಮಾನದಲ್ಲಿ ಆಧುನಿಕ ಶಿಕ್ಷಣ ನೀತಿಯನ್ನು ಅಳವಡಿಸುವಾಗ ದೇವನಾಗರಿ ಲಿಪಿಯಲ್ಲಿ ಕೊಂಕಣಿಯ ಶಿಕ್ಷಣವನ್ನು ಜಾರಿಗೊಳಿಸದಿರುವುದು. (v) ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಪ್ರಯೋಜನಗಳನ್ನು ಹೊಂದಲು ಕೊಂಕಣಿಗರಿಗೆ ಹೆಚ್ಚು ಅಭಿವೃದ್ಧಿ ಹೊಂದಿದ ಪ್ರಬಲ ಭಾಷೆಯನ್ನು ಶಿಕ್ಷಣಕ್ಕಾಗಿ ಆರಿಸಿಕೊಳ್ಳಲು ಅವಕಾಶ ಕಲ್ಪಿಸಲಾಯಿತು.

ಹದಿನಾರನೇ ಶತಮಾನದಲ್ಲಿ ಗೋವಾಕ್ಕೆ ಆಗಮಿಸಿದ ಕ್ರಿಶ್ಚಿಯನ್ ಮಿಷನರಿಗಳು ಕೊಂಕಣಿಗೆ ರೋಮನ್ ಲಿಪಿಯನ್ನು ಬಳಸತೊಡಗಿದರು. ಮುದ್ರಣ ತಂತ್ರಜ್ಞಾನವನ್ನು ಗೋವಾಕ್ಕೆ ಪರಿಚಯಿಸಿ ಭಾರತೀಯ ಭಾಷೆಗಳಲ್ಲಿ ಪುಸ್ತಕಗಳನ್ನು ಪ್ರಕಟಿಸಲು ಮುಂದಾದ ಈ ಮಿಷನರಿಗಳು ದೇವನಾಗರಿ ಲಿಪಿಯಲ್ಲಿ ಅಚ್ಚು ಮಾಡಲು ಸುಮಾರು 600 ಮೊಳೆಗಳನ್ನು ಸಿದ್ಧಪಡಿಸಬೇಕಾಗುವುದೆಂಬುದನ್ನು ಮನಗಂಡರು. ಆದರೆ ರೋಮನ್ ಲಿಪಿಯಲ್ಲಿ ಈ ಪುಸ್ತಕಗಳನ್ನು ಪ್ರಕಟಿಸಲು ಕೇವಲ 24 ಮೊಳೆಗಳು ಸಾಕಾಗಿದ್ದವು. (ಕೆಳಗೆ 11ರಲ್ಲಿ ಕೊಟ್ಟಿರುವುದನ್ನು ನೋಡಿ). ಪ್ರಾಯೋಗಿಕವಾಗಿ ಈ ಒಂದು ಪ್ರಯೋಜನವನ್ನು ಮನಗಂಡ ಮಿಷನರಿಗಳು ಕೊಂಕಣಿ ಪುಸ್ತಕಗಳನ್ನು ರೋಮನ್ ಲಿಪಿಯಲ್ಲಿಯೇ ಮುದ್ರಿಸಿ ಪ್ರಕಟಿಸಿದರು. ಕಾಲಕ್ರಮೇಣ ಗೋವಾದ ಒಂದು ಜನಸಮುದಾಯದವರೂ ಕೊಂಕಣಿಗೆ ರೋಮನ್ ಲಿಪಿಯನ್ನು ಬಳಸುವುದಕ್ಕೇ ಒಗ್ಗಿಹೋದರು.

ಕರ್ನಾಟಕ ಹಾಗೂ ಕೇರಳ ರಾಜ್ಯಗಳಲ್ಲಿ ಹತ್ತೊಂಬತ್ತನೆಯ ಶತಮಾನದಿಂದ ಜನರಿಗೆ ಶಿಕ್ಷಣವು ಇಂಗ್ಲಿಷ್ ಹಾಗೂ ಪ್ರಾದೇಶಿಕ ಭಾಷೆಗಳಲ್ಲಿ ಲಭ್ಯವಾಗತೊಡಗಿತು. ತಮ್ಮ ಸಾಮಾಜಿಕ ಮತ್ತು ಆರ್ಥಿಕ ಉಳಿವು ಹಾಗೂ ಯಶಸ್ಸಿಗೋಸ್ಕರ ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಕೊಂಕಣಿಗರು ತಮ್ಮ ಮಾತೃಭಾಷೆಗೆ ಸ್ಥಳೀಯ ಭಾಷೆಯ ಲಿಪಿಯನ್ನು ಅಂಗೀಕರಿಸುವ ಅಗತ್ಯವನ್ನು ಮನಗಂಡಿರಬೇಕು. ಮಾತೃಭಾಷೆಗೆ ಹಿಂದಿರುಗುವ ಸಂಭಾವ್ಯತೆ ಇಲ್ಲದಿದ್ದುದು, ಪ್ರಯಾಣ ಸೌಕರ್ಯಗಳ ಅಭಾವ ಹಾಗೂ ಸಂವಹನ ಮಾಧ್ಯಮಗಳ ಕೊರತೆ, ದೇಶದ ಇತರ ರಾಜ್ಯಗಳಲ್ಲಿದ್ದ ಕೊಂಕಣಿಗರೊಂದಿಗೆ ಸಂಪರ್ಕ ಇಲ್ಲದಿದ್ದುದು - ಈ ಎಲ್ಲ ಅಂಶಗಳು ಅವರು ಸ್ಥಳೀಯ ಪರಿಸರಕ್ಕೆ ಒಗ್ಗಿಕೊಂಡು ಅಲ್ಲಿಯ ಪ್ರಾದೇಶಿಕ ಭಾಷೆಯ ಲಿಪಿಯನ್ನು ಕೊಂಕಣಿಗೆ ಅಳವಡಿಸಿಕೊಳ್ಳುವಲ್ಲಿ ಹೆಚ್ಚಿನ ಚಾಲನೆ ನೀಡಿದವೆನ್ನಬಹುದು.

ಕೇರಳ ರಾಜ್ಯದಲ್ಲಿ ದೇವನಾಗರಿ ಲಿಪಿಯಲ್ಲಿ ಮೊಳೆಗಳು ಲಭ್ಯವಿಲ್ಲದಿದ್ದುದರಿಂದ ಕೊಂಕಣಿ ಪುಸ್ತಕ ಹಾಗೂ ವೃತ್ತ ಪತ್ರಿಕೆಗಳನ್ನು ಮಲಯಾಳ ಲಿಪಿಯಲ್ಲಿಯೇ ಮುದ್ರಿಸಬೇಕಾಯಿತು.

5. **ಈಗಾಗಲೇ ಜಾರಿಯಲ್ಲಿರುವಂತೆ ಕೊಂಕಣಿ ಭಾಷೆಯನ್ನು ಬರೆಯಲು ನಾವ್ಯಾಕೆ ಬೇರೆ ಬೇರೆ ಲಿಪಿಗಳನ್ನು ಉಪಯೋಗಿಸಬಾರದು?**

(ಅ) ದೀರ್ಘಕಾಲದಿಂದ ಕೊಂಕಣಿಗರು ತಮಗೆ ಸಮಿಾಪವಿರುವ ಸಣ್ಣ ಸಮುದಾಯಗಳ ಜನರ ಪ್ರಯೋಜನಕ್ಕಾಗಿ ಅನೇಕ ಲಿಪಿಗಳಲ್ಲಿ ತಮ್ಮ ಭಾಷೆಯನ್ನು ಬರೆಯುತ್ತ ಬಂದಿದ್ದಾರೆ. ಇದರ ಪರಿಣಾಮವಾಗಿ ಒಂದು ವರ್ಗದವರು ಬರೆದಿರುವುದು ಇತರ ವರ್ಗದವರಿಗೆ ಅಲಭ್ಯವಾಗಿದೆ. ಉದಾಹರಣೆಗೆ, ಮಲಯಾಳ ಲಿಪಿಯಲ್ಲಿ ಬರೆಯಲ್ಪಟ್ಟ ಕೊಂಕಣಿಯನ್ನು ಕರ್ನಾಟಕದ ಕೊಂಕಣಿಗರು ಓದಲಾರರು ಹಾಗೂ ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟ ಕೊಂಕಣಿ ಸಾಹಿತ್ಯವನ್ನು ಕೇರಳದವರು ಓದಲಾರರು. ಈ ಎರಡೂ ಲಿಪಿಗಳಲ್ಲಿ ಬರೆಯಲ್ಪಟ್ಟಿರುವ ಸಾಹಿತ್ಯವು - ಗೋವೆಯ ಅಥವಾ ಮಹಾರಾಷ್ಟ್ರದ ಕೊಂಕಣಿಗರಿಗೆ ಅಲಭ್ಯವಾಗಿರುವುದು.

(ಆ) ಈ ಪರಿಸ್ಥಿತಿ ಮುಕ್ತ ಲಿಖಿತ ಸಂವಹನಕ್ಕೆ ಅಡಚಣೆಯನ್ನುಂಟುಮಾಡಿದೆ ಹಾಗೂ ಭಾಷೆಯ ಬೆಳವಣಿಗೆಯನ್ನು ಕುಂಠಿತಗೊಳಿಸಿದೆ ಮತ್ತು ಭಾಷೆಯನ್ನು ಪ್ರಮಾಣಭೂತ ಮಾಡುವುದರ ಮೇಲೆ ಪ್ರತಿಕೂಲ ಪರಿಣಾಮ ಬೀರಿದೆ.

(ಇ) ಸಾಹಿತ್ಯವನ್ನು ಆನಂದಿಸಲು, ಶ್ಲಾಘಿಸಲು ಹಾಗೂ ಅದರ ಮೌಲ್ಯಮಾಪನ ಮಾಡುವಲ್ಲಿ ಹಲವಾರು ಲಿಪಿಗಳ ಪ್ರಯೋಗ ಒಂದು ಅಡ್ಡಿಯಾಗಿದೆ.

(ಈ) ಸಂಶೋಧನಾ ವಿದ್ಯಾರ್ಥಿಗಳಿಗೆ, ಅದರಲ್ಲಿಯೂ ಕೊಂಕಣಿಯ ಮೂಲ ಆಕರ ಗ್ರಂಥಗಳ ಅಧ್ಯಯನದಲ್ಲಿ ತೊಡಗಿದವರಿಗೆ, ವಿವಿಧ ಲಿಪಿಗಳ ಬಳಕೆಯು ಒಂದು ಗಂಭೀರ ಸಮಸ್ಯೆಯಾಗಿ ಪರಿಣಮಿಸಿದೆ. ಉದಾಹರಣೆಗೆ ಕೊಂಕಣಿ ಕಾದಂಬರಿಗಳ

ತುಲನಾತ್ಮಕ ಅಧ್ಯಯನ ಮಾಡುವವರು ಹಲವಾರು ಕಾದಂಬರಿಗಳನ್ನು ಓದಬೇಕಾಗುವುದು ಮತ್ತು ಅದಕ್ಕೆ ಬಹಳಷ್ಟು ಸಮಯ ಬೇಕಾಗುವುದು. ಅಂಥದ್ದರಲ್ಲಿ ಈ ಕಾದಂಬರಿಗಳು ವಿವಿಧ 4 ಲಿಪಿಗಳಲ್ಲಿ ಬರೆಯಲ್ಪಟ್ಟಿದ್ದರೆ ಆ ಸಂಶೋಧಕ ವಿದ್ಯಾರ್ಥಿಯು ಸಾಕಷ್ಟು ವೇಗವಾಗಿ ಓದಲು ಅನುಕೂಲವಾಗುವಂತೆ ಮೊದಲು ಆ ಎಲ್ಲ ಲಿಪಿಗಳನ್ನು ಕಲಿತುಕೊಳ್ಳಬೇಕಾಗುವುದು. ಇದು ಸಮಯ ಹಾಗೂ ಚೈತನ್ಯವನ್ನು ವ್ಯರ್ಥವಾಗಿಸುತ್ತದೆ ಮತ್ತು ಪರಕೀಯ ಲಿಪಿಯಲ್ಲಿ ಬರೆದ ಸಾವಿರಾರು ಪುಟಗಳ ಪುಸ್ತಕವನ್ನು ಓದುವುದನ್ನು ಒಂದು ಅಸಾಧ್ಯ ಸಾಹಸವನ್ನಾಗಿಸುತ್ತದೆ. ಈ ಸಮಸ್ಯೆಯು ಸಂಶೋಧನೆಯ ವ್ಯಾಪ್ತಿ ಹಾಗೂ ಗುಣಮಟ್ಟವನ್ನು ಸೀಮಿತಗೊಳಿಸುತ್ತದೆ.

6. **ಇದಕ್ಕೆ ಪರಿಹಾರವೇನು?**

ಗೋವಾ, ಕರ್ನಾಟಕ, ಕೇರಳ ಹಾಗೂ ಮಹಾರಾಷ್ಟ್ರ ರಾಜ್ಯಗಳ ಕೊಂಕಣಿಗರಿಗೆ ಪರಿಚಿತವಾಗಿರುವ ಒಂದು ಸಾಮಾನ್ಯ ಲಿಪಿಯನ್ನು ಬಳಸುವ ಮೂಲಕ ಈ ಪರಿಸ್ಥಿತಿಯನ್ನು ಸಾವಕಾಶವಾಗಿ ಕಾಲಕ್ರಮೇಣ ಸರಿಗೊಳಿಸಬಹುದು.

7. **ಕೊಂಕಣಿಗೆ ಒಂದು ಸಾಮಾನ್ಯ ಲಿಪಿಯನ್ನು ಪರಿಚಯಿಸುವುದು ಹೇಗೆ?**

ಬಾಲ್ಯದಲ್ಲಿ ದೀರ್ಘ, ವ್ಯವಸ್ಥಿತ ಹಾಗೂ ನಿಯಮಿತ ಶಾಲಾ ಶಿಕ್ಷಣ ಪ್ರಕ್ರಿಯೆಯ ಮೂಲಕ ಯಾವುದೇ ಭಾಷೆಯನ್ನು ಒಂದು ನಿರ್ದಿಷ್ಟ ಲಿಪಿಯಲ್ಲಿ ಓದುವುದನ್ನು ಮತ್ತು ಬರೆಯುವುದನ್ನು ಅಭ್ಯಾಸ ಮಾಡಿಕೊಳ್ಳಬಹುದು. ಒಂದು ಮಗುವು ಒಂದು ಭಾಷೆಯನ್ನು ಓದಲು/ಬರೆಯಲು ಬಾಲ್ಯದಲ್ಲಿ ಕಲಿತ ಲಿಪಿಯನ್ನೇ ಮುಂದೆ ಅಭ್ಯಾಸ ಬಲದಿಂದ ಜೀವನ ಪರ್ಯಂತ ಬಳಸುತ್ತದೆ. ಆದುದರಿಂದ ಭವಿಷ್ಯದಲ್ಲಿ ಕೊಂಕಣಿಗೆ ಒಂದು ಸಾಮಾನ್ಯ ಲಿಪಿಯ ಬಳಕೆಯನ್ನು ಗಟ್ಟಿಗೊಳಿಸಲು ಶಿಕ್ಷಣದ ಮಾರ್ಗವೇ ಅತ್ಯುತ್ತಮವಾದುದು.

8. **ಕೊಂಕಣಿ ಭಾಷೆಗೆ ಸಾಮಾನ್ಯ ಲಿಪಿಯನ್ನು ಉಪಯೋಗಿಸುವುದರಿಂದ ಆಗುವ ಪ್ರಯೋಜನಗಳೇನು?**

ಎಲ್ಲಾ ಕೊಂಕಣಿಗರು ಸಾಮಾನ್ಯವಾದ ಒಂದೇ ಲಿಪಿಯನ್ನು ಬರೆಯಲು ಬಳಸಿದರೆ, ಬರೆದುದೆಲ್ಲವೂ ಎಲ್ಲ ಕೊಂಕಣಿಗರಿಗೆ ಲಭ್ಯವಾಗುವುದು. ಆಗ ಆ ಸಾಹಿತ್ಯವನ್ನು ಓದಲು, ಆನಂದಿಸಲು, ಮೆಚ್ಚಲು, ಒಬ್ಬನ ಶಬ್ದಭಂಡಾರವನ್ನು ವೃದ್ಧಿಸಲು, ಭಾಷೆಯನ್ನು ವಿಶ್ಲೇಷಿಸಲು, ಆಡುಭಾಷೆಯ ವೈವಿಧ್ಯತೆಗಳನ್ನು ಗ್ರಹಿಸಲು ಹಾಗೂ ಅಂತಿಮವಾಗಿ ಭಾಷೆಗೆ ಪ್ರಮಾಣಭೂತವಾದ ರೂಪವನ್ನೊದಗಿಸುವಲ್ಲಿ ಯಾವುದೇ ಅಡಚಣೆಯುಂಟಾಗದು.

9. **ಪ್ರಚಲಿತದಲ್ಲಿರುವ ಸಾಮಾನ್ಯ ಲಿಪಿಗಳಾವುವು?**

ಪ್ರಸಕ್ತ ದೇವನಾಗರಿ (ಹಿಂದಿ ಎಂದು ಪರಿಚಿತವಾದ) ಲಿಪಿ (ಹಿಂದಿ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಬಳಸುವಂಥದು) ಹಾಗೂ ರೋಮನ್ ಲಿಪಿ (ಇಂಗ್ಲಿಷ್ ಭಾಷೆಯಲ್ಲಿ ಉಪಯೋಗಿಸುವಂಥದು) ಗಳು ದೇಶಾದ್ಯಂತ ಶಾಲೆಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ

ಎರಡು ಸಾಮಾನ್ಯ ಲಿಪಿಗಳಾಗಿವೆ. ಆದುದರಿಂದ ಈ ಎರಡು ಲಿಪಿಗಳಲ್ಲಿ ಒಂದನ್ನು ಕೊಂಕಣಿ ಭಾಷೆಗೆ ಸಾಮಾನ್ಯ ಲಿಪಿಯಾಗಿ ಬಳಸಬಹುದು.

10. **ಈ ಎರಡು ಲಿಪಿಗಳಲ್ಲಿ ಒಂದನ್ನು ಆಯ್ದುಕೊಳ್ಳುವುದಾದಲ್ಲಿ ಅಂತಾರಾಷ್ಟ್ರೀಯ ಭಾಷೆಗಳಿಗೆ ಬಳಸಲ್ಪಡುವ ಮತ್ತು ಈಗಾಗಲೇ ನಾಲ್ಕು ದಶಕಗಳಿಗಿಂತಲೂ ಅಧಿಕ ಸಮಯದಿಂದ ಕೊಂಕಣಿಯಲ್ಲಿಯೂ ಬಳಸಿಕೊಂಡು ಬಂದಿರುವ ರೋಮನ್ ಲಿಪಿಯನ್ನೇ ಏಕೆ ಆಯ್ದುಕೊಳ್ಳಬಾರದು?**

ವಿದ್ವಾಂಸರ ಹಾಗೂ ಭಾಷಾ ಪಂಡಿತರ ಪ್ರಕಾರ ಭಾರತೀಯ ಲಿಪಿಗಳು ಮೂಲತಃ ಧ್ವನಿ ನಿರೂಪಕಗಳಾಗಿವೆ. ಭಾರತೀಯ ಲಿಪಿಯಲ್ಲಿ ಒಂದು ಅಕ್ಷರವು (ದೇವನಾಗರಿಯೂ ಸೇರಿದಂತೆ) ಕೇವಲ ಒಂದು ಧ್ವನಿಯನ್ನು ಮಾತ್ರ ಪ್ರತಿನಿಧಿಸುತ್ತದೆ ಮತ್ತು ಆ ಧ್ವನಿ ಹಾಗೂ ಅದನ್ನು ಪ್ರತಿನಿಧಿಸುವ ಸಂಕೇತದ ಮಧ್ಯೆ ಯಾವುದೇ ಸಂದಿಗ್ಧತೆಗೆ ಆಸ್ಪದವಿಲ್ಲ. ಆದರೆ ರೋಮನ್ ಲಿಪಿಯಲ್ಲಿ ಅಕ್ಷರ ಸಂಯೋಜನೆ ಹಾಗೂ ಉಚ್ಚಾರದ ನಡುವಿನ ಸಂಬಂಧದಲ್ಲಿ ಖಚಿತತೆ ಇಲ್ಲದಿರುವಿಕೆಯಿಂದ ಅದು ಗೊಂದಲಮಯವಾಗಿದೆ. ಉದಾಹರಣೆಗೆ ಸ್ವರಾಕ್ಷರಗಳಾದ a, e, i, o, u ಮತ್ತು ವ್ಯಂಜನಾಕ್ಷರಗಳಾದ c, g, j, q, r, t, v, x, y ಮೊದಲಾದುವುಗಳು ಅವುಗಳ ಉಪಯೋಗಿಸಲ್ಪಡುವ ಐರೋಪ್ಯ ಭಾಷೆಗನುಗುಣವಾಗಿ ವಿಧವಿಧವಾಗಿ ಉಚ್ಚರಿಸಲ್ಪಡುತ್ತವೆ. ಇಂಗ್ಲಿಷಿನಲ್ಲಿಯೂ ಅವು ಸಂದರ್ಭಕ್ಕನುಗುಣವಾಗಿ ಬದಲಾಗುತ್ತವೆ. ಉಚ್ಚಾರಕ್ಕೆ ಸಂಬಂಧಿಸಿದಂತೆ ರೋಮನ್ ಲಿಪಿಯಲ್ಲಿರುವ ಸಂದಿಗ್ಧತೆಯು ಆ ಲಿಪಿಯನ್ನು ಭಾರತೀಯ ಭಾಷೆಗಳಿಗೆ ಅಸಮರ್ಪಕವಾಗಿಸುತ್ತದೆ ಮತ್ತು ತುಲನಾತ್ಮಕವಾಗಿ ದೇವನಾಗರಿಯಂತಹ ಭಾರತೀಯ ಲಿಪಿಯೇ ಭಾರತೀಯ ಭಾಷೆಗಳಿಗೆ ಹೆಚ್ಚು ಸೂಕ್ತವೆನಿಸುತ್ತದೆ. ಈ ವಿಷಯದಲ್ಲಿ ವಿದ್ವಾಂಸರ ವಿಚಾರಗಳು ಈ ಕೆಳಗಿನಂತಿವೆ.

## II

## ಸಾಮಾನ್ಯವಾಗಿ ದೇವನಾಗರಿ ಲಿಪಿಯ ಬಗ್ಗೆ ಹಾಗೂ ವಿಶೇಷವಾಗಿ ಕೊಂಕಣಿ ಭಾಷೆಗೆ ಅದರ ಸೂಕ್ತತೆಯ ಬಗ್ಗೆ ವಿದ್ವಾಂಸರ ಅನಿಸಿಕೆಗಳು

11. ಈ ಪತ್ರವನ್ನು ಮುಗಿಸುವ ಮೊದಲು ತಮ್ಮಲ್ಲಿ ಒಂದು ವಿಚಾರವನ್ನು ಹೇಳಬಯಸುವುದೇನೆಂದರೆ, ಮಲಬಾರ ಪ್ರಾಂತ್ಯದಲ್ಲಿರುವಂತೆ ಕ್ರಿಶ್ಚಿಯನ್ ಸಮುದಾಯದವರಿಗೆ ಉಪಯೋಗವಾಗುವಂತೆ ಈ ಪ್ರಾಂತ್ಯದಲ್ಲಿಯೂ ಈ ನಾಡಿನ ಭಾಷೆ ಹಾಗೂ ಅಕ್ಷರಗಳಲ್ಲಿ ಕೆಲವು ಪುಸ್ತಕಗಳು ಪ್ರಕಟಿಸಲ್ಪಡುವುದನ್ನು ಕಾಣಬೇಕೆಂದು ಹಲವು ವರ್ಷಗಳಿಂದ ನಾನು ಹಂಬಲಿಸಿದ್ದೆ. ಆದರೆ ಇದು ಎರಡು ಕಾರಣಗಳಿಂದಾಗಿ ಸಾಧ್ಯವಾಗಲಿಲ್ಲ; ಮೊದಲನೆಯದಾಗಿ ಸುಮಾರು 600ರಷ್ಟು ಮೊಳೆಗಳನ್ನು ಸಿದ್ಧಪಡಿಸುವುದು ಒಂದು ಅಸಾಧ್ಯ ಕಾರ್ಯವೆಂಬಂತೆ ತೋರಿದುದು ಏಕೆಂದರೆ ಇಲ್ಲಿಯ ಭಾಷೆಯ ಅಚ್ಚುಗಳು ಕೇವಲ ಪದಭಾಗಗಳಾಗಿದ್ದು ನಮ್ಮ ರೋಮನ್ ಭಾಷೆಯ ಅಚ್ಚುಗಳಂತೆ ಅಕ್ಷರಗಳಾಗಿರುವುದಿಲ್ಲ ಮತ್ತು ರೋಮನ್ ಲಿಪಿಯಲ್ಲಿ ಕೇವಲ 24 ಅಕ್ಷರಗಳಿವೆ. ಎರಡನೆಯದಾಗಿ ಪ್ರಾಂತೀಯ ಆಡಳಿತದ ಆದೇಶ ಮತ್ತು ಸಹಕಾರಗಳಿಲ್ಲದೆ ಈ ನನ್ನ ಆಸಕ್ತಿಯನ್ನು ಕಾರ್ಯರೂಪಕ್ಕಿಳಿಸುವುದು ಅಸಾಧ್ಯ ಮತ್ತು ಆಡಳಿತ ನಡೆಸುವವರು ಎಷ್ಟೊಂದು ವಿಷಯಗಳನ್ನು ನೋಡಿಕೊಳ್ಳಬೇಕಾಗುತ್ತದೆಯೆಂದರೆ ಈ ವಿಷಯದ ಬಗ್ಗೆ ಗಮನ ಹರಿಸಲು ಮತ್ತು ಅದಕ್ಕಿಂತಲೂ ಹೆಚ್ಚಾಗಿ ಇಂತಹ ಕಾರ್ಯವನ್ನು ಕೈಗೆತ್ತಿಕೊಳ್ಳಲು ಅವರಿಗೆ ಸಮಯವಿರುವುದಿಲ್ಲ.

*(ಫಾ. ಥೋಮಸ್ ಸ್ಟೀವನ್ಸ್ ಅವರು ದಿನಾಂಕ 5 ದಶಂಬರ್ 1608ರ ಅಂದಿನ ಜೈಸೂಟ್ಸ್ ಜನರಲ್‌ರವರಿಗೆ ಬರೆದ ಪತ್ರ ಪ್ರಿಯೋಲ್ಕರ ಎ.ಕೆ.ಯವರಿಂದ ಇತ್ತೀಚೆಗೆ ಉದ್ಧೃತಃ ದೊರೆತ ಫಾ. ಥೋಮಸ್ ಸ್ಟೀವನ್ಸ್‌ರವರ ಇತ್ತೀಚೆಗೆ ದೊರೆತ 2 ಪತ್ರಗಳು, **The Journal of the University of Bombay**, ಸಂಪುಟ XXV, ಭಾಗ II, ಪುಟ 123)*

12. "ನಮಗೆಲ್ಲ ತಿಳಿದಿರುವಂತೆ ಇಂಗ್ಲಿಷ್ ಭಾಷೆಯ ಕಾಗುಣಿತಾಕ್ಷರವು ಪ್ರಾಚೀನ ಕಾಲದ್ದಾಗಿದ್ದು, ಅದರ ಪದಗಳಲ್ಲಿರುವ ಅಕ್ಷರಗಳಿಗೆ ಮತ್ತು ಅವುಗಳ ಉಚ್ಚಾರಕ್ಕೆ ಪರಸ್ಪರ ಹೊಂದಾಣಿಕೆ ಇರುವುದಿಲ್ಲ. ಆದರೆ ಪ್ರಾಚೀನ ಸಂಸ್ಕೃತ ಅಕ್ಷರಗಳು ಮತ್ತು ಅವುಗಳ ಉಚ್ಚಾರದೊಳಗೆ ಅನ್ಯೋನ್ಯವಾದ ಸಂಬಂಧವಿದ್ದು ದೇಶೀಯ ವ್ಯಾಕರಣ ಶಾಸ್ತ್ರಜ್ಞರು ಅವುಗಳನ್ನು ಅತ್ಯಂತ ಸುವ್ಯವಸ್ಥಿತವಾಗಿ ಜೋಡಿಸಿರುವುದು ಒಂದು ಚೇತೋಹಾರಿ ಮಾದರಿಯಾಗಿದೆ. ಒಂದು ಅಕ್ಷರದೊಂದಿಗೆ ಕೇವಲ ಒಂದು ಉಚ್ಚಾರಣೆಯಷ್ಟೇ ಜೋಡಿಸಲ್ಪಟ್ಟಿದೆ. ಸಂಸ್ಕೃತದ ಓರ್ವ ವಿದ್ಯಾರ್ಥಿಯು ಅನಾಯಾಸವಾಗಿ ಪ್ರಾಥಮಿಕ ಧ್ವನಿಶಾಸ್ತ್ರವನ್ನು ಕೂಡ ಕಲಿಯುತ್ತಾನೆ. ಏಕೆಂದರೆ ತುಟಿ, ಹಲ್ಲು, ಹಲ್ಲುಗಳ ಬುಡ, ತಾಳಿಗೆ, ಅಂಗುಳು ಇತ್ಯಾದಿಗಳ ಅಂಗಗಳು ಉಚ್ಚಾರಣೆಯಲ್ಲಿ ಯಾವ ಪಾತ್ರವಹಿಸುತ್ತವೆ ಎಂಬುದನ್ನು ಅವನು ಇವುಗಳ ಸಹಾಯದಿಂದ ಕಲಿತುಕೊಳ್ಳುತ್ತಾನೆ. ಅದರ ಜೊತೆ ಆತ ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ತಾರತಮ್ಯವನ್ನೂ ಅರಿತುಕೊಳ್ಳುತ್ತಾನೆ. ಉಚ್ಚಾರಣೆಯಲ್ಲಿ ಒಳಗೊಳ್ಳುವ ದೇಹದ ಅಂಗಾಂಗಗಳ ಸ್ಥಾನದೊಂದಿಗೆ ವ್ಯವಸ್ಥಿತವಾದ ಸಂಬಂಧವನ್ನು ಹೊಂದಿರುವ ಈ ಕ್ರಮವು 'a, b, c, d .......' ಎಂಬ ಅರ್ಥವಿಲ್ಲದ ಅಕ್ಷರಮಾಲೆಯ ಕ್ರಮಕ್ಕಿಂತ ತೀರ ಭಿನ್ನವಾಗಿದೆ, ವಿಭಿನ್ನವಾಗಿದೆ."

*(ಮಾರ್ಗರೆಟ್ ಶ್ಲೋಚ್, **'ದ ಗಿಫ್ಟ್ ಆಫ್ ಲ್ಯಾಂಗ್ವೆಜ್'**, ನ್ಯೂಯಾರ್ಕ್ - 1955, ಪು. 39)*

13. "ಕೊಂಕಣಿ ಭಾಷೆಯು ಮೊದಲು ಬಾಲಬೋಧ ಅಥವಾ ನಾಗರ ಎಂಬ ಲಿಪಿಯಲ್ಲಿ ಬರೆಯಲ್ಪಡುತ್ತಿತ್ತು. ಕೆಲವು ಸಲ ಇದನ್ನು ಮೋಡಿ ಅಕ್ಷರಗಳಲ್ಲಿ ಅಂದರೆ ಮಹಾರಟ್ಟಿ (ಮರಾಠಿ) ಅಕ್ಷರಗಳಲ್ಲಿಯೂ ಬರೆಯಲಾಗುತ್ತಿತ್ತು."

*(ಅಂಜೆಲೂಸ್ ಫ್ರಾನ್ಸಿಸ್, ಝೇವಿಯರ್ ಮಾಫೇ, **'ಎ ಕೊಂಕಣಿ ಗ್ರಾಮರ್'**, ಮಂಗಳೂರು 1882 ಪುಟ 1)*

14. "ಇದೇ ಸಿದ್ಧಾಂತವನ್ನು ಆಧರಿಸಿ ಅವರು ರೋಮನ್ ಹಾಗೂ ಕೆನರೀಸ್ (ಕನ್ನಡ)ಗೆ ಲಿಪ್ಯಂತರ ಮಾಡಿದ್ದಾರೆ. ಹೀಗೆ ಮಾಡುವಾಗ ಕೆನರೀಸ್ ಅಕ್ಷರಗಳಲ್ಲಿ ಅನೇಕ ಮಾರ್ಪಾಟುಗಳನ್ನು ಮಾಡಬೇಕಾಯಿತು ಹಾಗೂ ಕೊಂಕಣಿಗೆ ಸೂಕ್ತವಾದ ಮರಾಠಿ ಲಿಪಿಗೆ ಸಾಮ್ಯವಿರುವಂತೆ ಸ್ವಲ್ಪ ಪ್ರಯತ್ನವನ್ನೂ ಮಾಡಬೇಕಾಯಿತು."

*(ಅಂಜೆಲೂಸ್ ಫ್ರಾನ್ಸಿಸ್ ಝೇವಿಯರ್ ಮಾಫೇ - **ಕೊಂಕಣಿ - ಇಂಗ್ಲಿಷ್ ಶಬ್ದಕೋಶ** 1883, ಮುನ್ನುಡಿ, ಪುಟ 6ರಲ್ಲಿ ಲಿಪ್ಯಂತರದ ಸಿದ್ಧಾಂತದ ಬಗ್ಗೆ)*

15. "ಕೊಂಕಣಿಗೆ ದೇವನಾಗರಿಯು ಸೂಕ್ತವಾದ ಲಿಪಿ -

*(ರೆ। ಫಾ। ಡಾ। ಬಾಸೆಲ್ ಡಿ'ಸೋಜರವರ ಅಭಿಪ್ರಾಯ, ಮಂಗಳೂರಿನಲ್ಲಿ ನಡೆದ ಪರಿಷತ್ತಿನ 11ನೆಯ ಅಧಿವೇಶನದಲ್ಲಿ ಪುಸ್ತಕ ಪ್ರದರ್ಶನದ ಉದ್ಘಾಟನೆಯ ನಂತರ ತಿಳಿಸಿದಂತೆ. - **ರಾಕ್ಣೊ ಸಾಪ್ತಾಹಿಕ,** 22 ಫೆಬ್ರವರಿ, 1976)*

16. "ಕೇರಳ, ಕರ್ನಾಟಕ (ದಕ್ಷಿಣ ಕನ್ನಡ), ಗೋವಾ, ಮಹಾರಾಷ್ಟ್ರ ಹಾಗೂ ಇತರೆಡೆಗಳಲ್ಲಿ ಪ್ರಚಲಿತದಲ್ಲಿರುವ ಕೊಂಕಣಿಯ ರೂಪಗಳಿಗೆ ದೇವನಾಗರಿ ಲಿಪಿಯನ್ನು ಅಂಗೀಕರಿಸಿ ನೀವು ಒಂದು ಒಳ್ಳೆಯ ಕೆಲಸ ಮಾಡಿದಿರಿ. ಸ್ಥಳೀಯ ಅಗತ್ಯಕ್ಕೆ ಮತ್ತು ಕನ್ನಡ ಹಾಗೂ ಮಲಯಾಳ ಲಿಪಿಗಳಲ್ಲಿಯೇ ಬರೆಯುವ ಅಭ್ಯಾಸವುಳ್ಳವರ ಅನುಕೂಲಕ್ಕಾಗಿ ಕೆಲವು ಪ್ರಕಟನೆಗಳನ್ನು ಕನ್ನಡ ಮತ್ತು ಮಲಯಾಳ ಲಿಪಿಗಳಲ್ಲಿ ಹೊರತರುವುದನ್ನು ಅಂತಹ ಭಾಷೆಗಳಲ್ಲಿ ಮುಂದುವರಿಸಬಹುದು. ಆದರೆ ನಿಮ್ಮ ಆದರ್ಶವು ಕೊಂಕಣಿ ಭಾಷೆಗೆ ದೇವನಾಗರಿ ಮತ್ತು ದೇವನಾಗರಿ ಲಿಪಿಯನ್ನು ಮಾತ್ರ ಅಳವಡಿಸುವುದಾಗಿರಬೇಕು."

*(ಕೊಂಕಣಿ ಭಾಷಾ ಪ್ರಚಾರ ಸಭಾ, ಕೊಚ್ಚಿ ಇದರ ಗೌರವಾಧ್ಯಕ್ಷರಾದ ಶ್ರೀ ಎಸ್. ಪುರುಷೋತ್ತಮ ಮಲ್ಯರು ಕರ್ನಾಟಕದ ಮುಖ್ಯಮಂತ್ರಿಗಳಿಗೆ ಪ.ಸಂ. 463/05 ದಿನಾಂಕ 27.06.2005ರಂದು ಬರೆದ ತಮ್ಮ ಪತ್ರದಲ್ಲಿ ಸಾಹಿತ್ಯ ಅಕಾಡೆಮಿ ನವದೆಹಲಿಯ ಮಾಜಿ ಅಧ್ಯಕ್ಷರು ಹಾಗೂ ಸುಪ್ರಸಿದ್ಧ ಭಾಷಾ ಶಾಸ್ತ್ರಜ್ಞ ದಿವಂಗತ ಡಾ। ಸುನೀತಿ ಕುಮಾರ್ ಚಟರ್ಜಿಯವರು ಮೇ 10, 1976ರಂದು ತಮಗೆ ಬರೆದ ಪತ್ರದ ಸಾಲುಗಳನ್ನು ಉದ್ಧರಿಸುತ್ತ)*

17. "ದೇವನಾಗರಿಯು ಇಂಡೋ-ಆರ್ಯ ಪರಿವಾರದ ಭಾಷೆಗಳಿಗೆ ಸಾಮಾನ್ಯ ಲಿಪಿಯೆಂದು ಪರಿಗಣಿಸಲ್ಪಡುವುದರಿಂದ ಅದೇ ಪರಿವಾರಕ್ಕೆ ಸೇರಿದ ಕೊಂಕಣಿ ಭಾಷೆಗೂ 'ದೇವನಾಗರಿ ಲಿಪಿ'ಯನ್ನು ಅಳವಡಿಸುವ ಮೂಲಕ ಆ ಭಾಷೆಯ ಸಂವಹನ ವ್ಯಾಪ್ತಿಯು ಹೆಚ್ಚುವುದು ಎಂಬುದಾಗಿ ಈ ಪರಿಷತ್ತು ಪರಿಭಾವಿಸುತ್ತದೆ."

*(08.07.1939ರಂದು ಕಾರವಾರದಲ್ಲಿ ನಡೆದ ಮೊದಲ ಕೊಂಕಣಿ ಪರಿಷತ್ತಿನ ಸಮಾವೇಶದಲ್ಲಿ ಕೈಗೊಂಡ ಸಂಕಲ್ಪದಲ್ಲಿ - '**ಕೊಂಕಣಿ ದಿರ್ವೆಂ**'ನಲ್ಲಿ ವರದಿಯಾದಂತೆ)*

18. "ಕೊಂಕಣಿ ಭಾಷೆಗೆ ಲಿಪಿಯಿಲ್ಲವೆಂದು ಜನರು ಹೇಳುತ್ತಾರೆ. ಆದರೆ ಇದು ಸರಿಯಲ್ಲ. ಇದಕ್ಕೆ ಲಿಪಿ ಇದೆ-ಅದು ದೇವನಾಗರಿ".

*(ಕೊಂಕಣಿ ಪರಿಷತ್ತಿನ ಸ್ಥಾಪಕರಾದ ದಿವಂಗತ ಮಾಧವ ಮಂಜುನಾಥ ಶ್ಯಾನುಭಾಗರು ಕೆನರಾ ಪ್ರೌಢಶಾಲೆ, ಮಂಗಳೂರಿನಲ್ಲಿ ಮಾಡಿದ ಭಾಷಣದಿಂದ 05.01.1940ರ **ರಾಕ್ಣೊ ಸಾಪ್ತಾಹಿಕದ** ವರದಿ)*

19. "ಗೋವನರು ಕೊಂಕಣಿ ಭಾಷೆಯನ್ನು ಲ್ಯಾಟಿನ್ ಅಕ್ಷರಗಳಲ್ಲಿ ಬರೆಯುತ್ತಾರೆ. ನಾವು ಮಂಗಳೂರಿನವರು ಕಾನಡಿಯಲ್ಲಿ ಬರೆದರೆ ಉಳಿದವರೆಲ್ಲರು ದೇವನಾಗರಿಯಲ್ಲಿ

ಬರಯುತ್ತಾರೆ. ಕೆಲಸಮಯದಿಂದೀಚೆಗೆ ಎಲ್ಲರೂ ಒಂದೇ ಲಿಪಿಯನ್ನು ಬಳಸಬೇಕೆನ್ನುವ ಪ್ರಸ್ತಾಪ ಬಂದಿತ್ತು. ಆದುದರಿಂದ ಪರಿಷತ್ತು ಇದರ ಬಗ್ಗೆ ಚರ್ಚೆ ನಡೆಸಿತು. 1940ರಲ್ಲಿ ನಡೆದ ಪರಿಷತ್ತಿನ ಎರಡನೆಯ ಅಧಿವೇಶನದ ಅಧ್ಯಕ್ಷರಾಗಿದ್ದ ಶ್ರೀ ಜೆರೋಮ್ ಸಲ್ಡಾನಾರವರು ರೋಮನ್ ಲಿಪಿಯ ಪರವಾಗಿದ್ದರು. ಆದರೆ ಇತರರು ನಾಗರಿ ಲಿಪಿಯೇ ಉತ್ತಮವೆಂದು ಅಭಿಪ್ರಾಯ ಪಟ್ಟರು. ಅಂತಿಮವಾಗಿ ಕೊಂಕಣಿಗೆ ನಾಗರಿ ಲಿಪಿಯನ್ನೇ ಅಳವಡಿಸಬೇಕೆಂದು ಒಮ್ಮತದಿಂದ ಸಂಕಲ್ಪ ಕೈಗೊಳ್ಳಲಾಯಿತು''

*(19.01.1941ರ **'ರಾಕ್ಣೊ'** ವಾರಪತ್ರಿಕೆಯ ವರದಿ)*

20. ''ವಿವಿಧ ಪ್ರಾಂತಗಳ ಕೊಂಕಣಿಯನ್ನು ಒಂದೇ ರೂಪಕ್ಕೆ ತರಲು ಮತ್ತು ಅದನ್ನು ಪ್ರಮಾಣೀಕರಿಸಲು ಅದು ಒಂದೇ ತೆರನಾಗಿರಬೇಕಾದರೆ ದೇವನಾಗರಿ ಲಿಪಿಯನ್ನು, ಅಂದರೆ ಇಂಡೋ-ಆರ್ಯ ಭಾಷೆಗಳಿಗೆ ಸಹಜವಾಗಿ ಸರಿಹೊಂದುವ ಭಾರತೀಯ ಅಕ್ಷರಗಳನ್ನು ಬಳಸತಕ್ಕದ್ದು''.

*[ಜನವರಿ 15 ಮತ್ತು 16, 1949ರಲ್ಲಿ ಮುಂಬೈಯಲ್ಲಿ ನಡೆದ ಪರಿಷತ್ತಿನ 4ನೇ ಅಧಿವೇಶನದ ಪ್ರಚಾರ ಸಮಿತಿಯ ಮನವಿ (**'ಸುಖ್-ದುಖ್'**, ಕ್ರಿಸ್ಮಸ್, 1948)]*

21. ''ಕೊಂಕಣಿ ಭಾಷೆಗೆ ದೇವನಾಗರಿ ಲಿಪಿಯನ್ನು ಅಧಿಕೃತವಾಗಿ ಬಳಸಿದರೆ ಆ ಭಾಷೆಯಲ್ಲಿ ಒಮ್ಮತ ಮೂಡಿ ಅದರ ಸಾಹಿತ್ಯದ ಅಭಿವೃದ್ಧಿಯು ತ್ವರಿತಗೊಳ್ಳುವುದು.''

*(ಅಖಿಲ ಭಾರತ ಕೊಂಕಣಿ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ವಿ.ಜೆ.ಪಿ. ಸಲ್ಡಾನಾರವರು 27 ಫೆಬ್ರವರಿ, 1982ರಂದು ಮಾಡಿದ ಅಧ್ಯಕ್ಷೀಯ ಭಾಷಣದಿಂದ)*

22. ''ಲಿಪಿ ಇಲ್ಲದಿರುವುದು ಕೊಂಕಣಿಯ ಸಮಸ್ಯೆಯಲ್ಲ. ಕೊಂಕಣಿಯು ಸಂಸ್ಕೃತದಿಂದ ಹುಟ್ಟಿದುದರಿಂದ ನಾಗರಿ ಲಿಪಿಯೇ ಅದರ ಹಕ್ಕಿನ ಲಿಪಿಯಾಗಿದೆ.''

*(ವಿ.ಜೆ.ಪಿ. ಸಲ್ಡಾನಾ, **'ರಾಕ್ಣೊ' ವಾರಪತ್ರಿಕೆ,** ಮೇ 24, 1984)*

## III

## ದೇವನಾಗರಿ, ಕೊಂಕಣಿಯ ಮಾನ್ಯತೆ ಪಡೆದ ಲಿಪಿ

### 23. ಸಾಹಿತ್ಯ ಅಕಾಡೆಮಿಯ ಮಾನ್ಯತೆ

''ಸಾಹಿತ್ಯ ಅಕಾಡೆಮಿಯು ದೇವನಾಗರಿ ಲಿಪಿಯಲ್ಲಿ ಬರೆದ ಕೊಂಕಣಿ ಭಾಷೆಗೆ ಮಾತ್ರ ಮಾನ್ಯತೆ ನೀಡಿದೆ. ಕೊಂಕಣಿಗೆ ಬೇರೆ ಯಾವ ಲಿಪಿಯನ್ನೂ ಮಾನ್ಯ ಮಾಡಲಾಗಿಲ್ಲ.''

*- ಸಾಹಿತ್ಯ ಅಕಾಡೆಮಿ, ನವದೆಹಲಿಯ ಉಪಕಾರ್ಯದರ್ಶಿ (ಕಾರ್ಯಕ್ರಮ) ಆಗಿದ್ದ ಶ್ರೀ ವಿಷ್ಣು ಖಾರೆಯುವರು ಕೊಂಕಣಿ ಭಾಷಾ ಪ್ರಚಾರ ಸಭೆ, ಕೊಚ್ಚಿಯ ಗೌರವ ಕಾರ್ಯದರ್ಶಿಯಾದ ಶ್ರೀ ಎನ್. ಪುರುಷೋತ್ತಮ ಮಲ್ಯರಿಗೆ ದಿನಾಂಕ 22 ಅಕ್ಟೋಬರ್ 1982 ರಂದು ಬರೆದ ತಮ್ಮ ಪತ್ರ ಸಂ.ಎಸ್ಎ 71/1/10700 ರಲ್ಲಿ.*

**24. ಗೋವಾದ ಅಧಿಕೃತ ಭಾಷೆ**

''ಕೊಂಕಣಿ ಭಾಷೆ'' ಎಂದರೆ ದೇವನಾಗರಿ ಲಿಪಿಯಲ್ಲಿ ಬರೆದ ಕೊಂಕಣಿ ಭಾಷೆ;

*(ಗೋವಾ, ದಾಮನ್ ಮತ್ತು ದಿಯು ಸರಕಾರದ ಅಧಿಕೃತ ಭಾಷಾ ಮಸೂದೆ, 1987ರ ಸೆಕ್ಷನ್ 2(ಸಿ) ಯಲ್ಲಿ)*

**25. ಭಾರತ ಸಂವಿಧಾನದ 8ನೇ ಅನುಸೂಚಿಯಲ್ಲಿ ಸೇರ್ಪಡೆ**

ಸಾಹಿತ್ಯ ಅಕಾಡೆಮಿಯಿಂದ ಮಾನ್ಯತೆ ಪಡೆದುದರಿಂದ ಮತ್ತು ಗೋವಾ ರಾಜ್ಯದ ಅಧಿಕೃತ ಭಾಷೆಯಾದುದರಿಂದ ಕೊಂಕಣಿಯನ್ನು ಭಾರತ ಸಂವಿಧಾನದ 8ನೇ ಅನುಸೂಚಿಯಲ್ಲಿ ಸೇರಿಸಿಕೊಳ್ಳಲಾಯಿತು.

**26. "ಆದರೆ ಕೊಂಕಣಿ, ನೇಪಾಳಿ ಮತ್ತು ಮಣಿಪುರಿ ಭಾಷೆಗಳನ್ನು ಸಂವಿಧಾನದ 8ನೇ ಅನುಸೂಚಿಯಲ್ಲಿ ಸೇರಿಸಲು ತಿದ್ದುಪಡಿ ತಂದ 1992ರ ಮಸೂದೆಯಲ್ಲಿ ಕೊಂಕಣಿಯ ಲಿಪಿಯ ಬಗ್ಗೆ ಅದೇಕೆ ಪ್ರಸ್ತಾಪವಿಲ್ಲ?"**

ಭಾರತ ಸಂವಿಧಾನದ ಎಂಟನೇ ಅನುಸೂಚಿ ಸಂವಿಧಾನಿಕ ಮಾನ್ಯತೆ ಪಡೆದಿರುವ ಭಾಷೆಗಳ ಒಂದು ಪಟ್ಟಿಯಾಗಿದೆ. ಆ ಪಟ್ಟಿಯಲ್ಲಿ ಯಾವುದೇ ಭಾಷೆಯ ಲಿಪಿಯ ಬಗ್ಗೆ ಯಾವ ಪ್ರಸ್ತಾಪವೂ ಇಲ್ಲ. ಆದುದರಿಂದ ಕೊಂಕಣಿ ಭಾಷೆಯ ಲಿಪಿಯ ಬಗ್ಗೆ ಮಾತ್ರವಲ್ಲ, ಬೇರೆ ಯಾವುದೇ ಭಾಷೆಯ ಲಿಪಿ ಯಾವುದೆಂದು ಅದರಲ್ಲಿ ಸೂಚಿಸಲಾಗಿಲ್ಲ. ಭಾಷೆಯ ಲಿಪಿಯ ಪ್ರಶ್ನೆ ಇತ್ಯರ್ಥವಾಗಿದೆಯೆಂದು ಅದರಲ್ಲಿ ಭಾವಿಸಲಾಗಿದೆ ಮತ್ತು ಆಯಾ ಭಾಷೆಯ ಅಧಿಕೃತ ಲಿಪಿ ಯಾವುದೆಂಬುದು ದೇಶದ ಚಲಾವಣೆಯಲ್ಲಿರುವ ನೋಟುಗಳ ಮೌಲ್ಯವನ್ನು ಬರೆಯುವಲ್ಲಿ ಸೂಚಿತವಾಗಿದೆ.

**27. ಯೋಜನೆಗಳನ್ನು ವಹಿಸಿಕೊಡುವಲ್ಲಿ ನ್ಯಾಶನಲ್ ಬುಕ್ ಟ್ರಸ್ಟ್‌ನಿಂದ ಮಾನ್ಯತೆ**

ಸಾಹಿತ್ಯ ಅಕಾಡೆಮಿಯಲ್ಲದೆ ನ್ಯಾಶನಲ್ ಬುಕ್ ಟ್ರಸ್ಟ್ ಕೂಡ ಕೊಂಕಣಿಗೆ ಕೇವಲ ದೇವನಾಗರಿ ಲಿಪಿಯನ್ನಷ್ಟೇ ಮಾನ್ಯ ಮಾಡಿದೆ. ಹೀಗೆ ಅದರ ಎಲ್ಲ ಕೊಂಕಣಿ ಪ್ರಕಟಣೆಗಳು ದೇವನಾಗರಿ ಲಿಪಿಯಲ್ಲಿಯೇ ಇವೆ.

**28. ಕೇಂದ್ರ ಲೋಕಸೇವಾ ಆಯೋಗದ (UPSC) ಪರೀಕ್ಷೆಗಳಲ್ಲಿ ಐಚ್ಛಿಕ ಭಾಷೆ**

ಕೇಂದ್ರ ಲೋಕಸೇವಾ ಆಯೋಗವು ತನ್ನ ಐ.ಎ.ಎಸ್ ಪರೀಕ್ಷೆಗಳಲ್ಲಿ ಕೊಂಕಣಿಯಲ್ಲಿ

ಬರೆಯುವಂತಹ ಪತ್ರಿಕೆಯನ್ನೂ ಸೇರಿಸಿದೆ ಮತ್ತು ಅದನ್ನು ದೇವನಾಗರಿ ಲಿಪಿಯಲ್ಲಿ ಬರೆಯಬೇಕಾಗಿದೆ.

## IV

## ಕೊಂಕಣಿ ಮತ್ತು ಶಿಕ್ಷಣದಲ್ಲಿ ಅದರ ಲಿಪಿ

**29. ವಿವಿಧ ರಾಜ್ಯಗಳ ಶೈಕ್ಷಣಿಕ ವ್ಯವಸ್ಥೆಯಲ್ಲಿ ಕೊಂಕಣಿಯ ಸ್ಥಿತಿ-ಗತಿ ಹೇಗಿದೆ?**

ಗೋವಾದಲ್ಲಿ 1962ರಲ್ಲಿ ಕೊಂಕಣಿಯನ್ನು ಒಂದು ಭಾಷೆಯಾಗಿ ಶಾಲಾ ಪಠ್ಯಕ್ರಮದಲ್ಲಿ ಸೇರಿಸಲಾಯಿತು. ಅಂದಿನಿಂದ ಅದು ಶೈಕ್ಷಣಿಕ ವ್ಯವಸ್ಥೆಯಲ್ಲಿ ತನ್ನ ಬಲವನ್ನು ವೃದ್ಧಿಸಿಕೊಳ್ಳುತ್ತ ಬಂದಿದ್ದು, ಈಗ ಈ ಭಾಷೆಯನ್ನು ಗೋವಾದ ಎಲ್ಲ ಶಾಲಾ-ಕಾಲೇಜುಗಳಲ್ಲಿ ಎಲ್ಲ ಮಟ್ಟಗಳಲ್ಲಿ ಕಲಿಸಲಾಗುತ್ತದೆ. ಕೇರಳದಲ್ಲಿ 1972ರಿಂದ ಕೊಚ್ಚಿಯ ಎರಡು ಶಾಲೆಗಳಲ್ಲಿ ಕೊಂಕಣಿಯನ್ನು ಒಂದು ಹೆಚ್ಚುವರಿ ಭಾಷೆಯನ್ನಾಗಿ ಕಲಿಸಲಾಗುತ್ತಿದೆ.

**30. ವಿವಿಧ ರಾಜ್ಯಗಳಲ್ಲಿ ಕೊಂಕಣಿಯನ್ನು ಕಲಿಸಲು ಬಳಸುವ ಲಿಪಿ ಯಾವುದು?**

ಗೋವಾ ಮತ್ತು ಕೇರಳ - ಎರಡೂ ರಾಜ್ಯಗಳಲ್ಲಿ ಕೊಂಕಣಿಯನ್ನು ದೇವನಾಗರಿ ಲಿಪಿಯಲ್ಲಿ ಕಲಿಸಲಾಗುತ್ತಿದೆ.

**31. ಪಠ್ಯಪುಸ್ತಕ ಹಾಗೂ ಓದಿನ ಸಾಮಾಗ್ರಿಗಳ ಲಭ್ಯತೆ**

ಗೋವಾದಲ್ಲಿ ಕೊಂಕಣಿ ಪಠ್ಯ ಪುಸ್ತಕಗಳನ್ನು ಆಧುನಿಕ ಭಾಷಾ ಬೋಧನೆಯ ಸಿದ್ಧಾಂತಕ್ಕನುಗುಣವಾಗಿ ರೂಪಿಸಿದ್ದು, ಎಲ್ಲ ಸ್ತರದ ಶಾಲಾ ಶಿಕ್ಷಣದ ಪಠ್ಯ ಪುಸ್ತಕಗಳು ಕೊಂಕಣಿಯಲ್ಲಿ ಲಭ್ಯವಿವೆ. ಶಾಲಾ ಪಠ್ಯ ಪುಸ್ತಕಗಳಷ್ಟೇ ಅಲ್ಲದೆ ನಿಘಂಟು, ವ್ಯಾಕರಣ ಪುಸ್ತಕ, ಭಾಷಾ ಅಭ್ಯಾಸ ಪುಸ್ತಕ, ಕೈಪಿಡಿ, ಶಿಕ್ಷಣ ಸಹಾಯಕ ಸಾಮಾಗ್ರಿ, ಮಕ್ಕಳ ಸಾಹಿತ್ಯ ಮತ್ತಿತರ ಓದಿನ ಸಾಮಾಗ್ರಿಗಳೂ ದೇವನಾಗರಿ ಲಿಪಿಯಲ್ಲಿರುವ ಕೊಂಕಣಿಯಲ್ಲಿ ಲಭ್ಯವಿವೆ.

**32. ಆದರೆ ಗೋವಾದಲ್ಲಿ ಯಾರೂ ಕೊಂಕಣಿಯನ್ನು ದೇವನಾಗರಿ ಲಿಪಿಯಲ್ಲಿ ಕಲಿಯುವುದಿಲ್ಲವಲ್ಲ!**

ಇದು ಸತ್ಯಕ್ಕೆ ದೂರವಾದ ಸಂಗತಿ. ಕೆಲವು ಅಸಂತುಷ್ಟ ವ್ಯಕ್ತಿಗಳು ಹರಡಿದ ತಪ್ಪು ಭಾವನೆಯ ಪರಿಣಾಮವಿದು. ಕಳೆದ ವರ್ಷಗಳಲ್ಲಿ ಗೋವಾದ ಶಾಲೆಗಳಲ್ಲಿ ಕೊಂಕಣಿ ಮತ್ತು ಇತರ ಭಾಷೆಗಳನ್ನು ಐಚ್ಛಿಕ ಭಾಷೆಯಾಗಿ ಆಯ್ದುಕೊಂಡ ವಿದ್ಯಾರ್ಥಿಗಳ ಸಂಖ್ಯೆಯಲ್ಲಿಯ ಹೆಚ್ಚಳವನ್ನು ಈ ಕೆಳಗಿನ ಪಟ್ಟಿಯಲ್ಲಿ ನೀಡಲಾಗಿದೆ.

ತಖ್ತೆ 1. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಭಾಷೆಯನ್ನು ಆಯ್ದುಕೊಂಡ ವಿದ್ಯಾರ್ಥಿಗಳ ಸಂಖ್ಯೆ (1980-2004)

| ಭಾಷೆ | 1980 | 1985 | 1990 | 1995 | 2000 | 2004 |
|---|---|---|---|---|---|---|
| ಇಂಗ್ಲೀಷ್ | 37174 | 46036 | 42798 | 11630 | 16474 | 15140 |
| ಮರಾಠಿ | 78607 | 73814 | 57000 | 52868 | 46512 | 37375 |
| ಕೊಂಕಣಿ | 2047 | 314 | 1644 | 29763 | 29691 | 26218 |

ತಖ್ತೆ 2. 10ನೇ ತರಗತಿಯಲ್ಲಿ ಕೊಂಕಣಿ ಮತ್ತು ಮರಾಠಿಯನ್ನು ಆಯ್ದುಕೊಂಡ ವಿದ್ಯಾರ್ಥಿಗಳ ಸಂಖ್ಯೆ (1990-2004)

| ಭಾಷೆ | 1990 | 1994 | 1998 | 2002 | 2004 |
|---|---|---|---|---|---|
| ಕೊಂಕಣಿ | 5315 | 6134 | 6576· | 7136 | 6889 |
| ಮರಾಠಿ | 9869 | 10529 | 8791 | 8289 | 7529 |

ತಖ್ತೆ 3. 12ನೇ ತರಗತಿಯಲ್ಲಿ ಭಾಷೆಯನ್ನು ಆಯ್ದುಕೊಂಡ ವಿದ್ಯಾರ್ಥಿಗಳ ಸಂಖ್ಯೆ (1990-2004)

| ಭಾಷೆ | 1990 | 1994 | 1998 | 2002 | 2004 |
|---|---|---|---|---|---|
| ಕೊಂಕಣಿ | 2050 | 2472 | 2761 | 3100 | 3167 |
| ಮರಾಠಿ | 2474 | 2929 | 2930 | 2734 | 2505 |

ತಖ್ತೆ 4. ಪದವಿ (ಬಿ.ಎ) ಸ್ತರದಲ್ಲಿ ಭಾಷೆಗಳನ್ನು ಆಯ್ದುಕೊಂಡ ವಿದ್ಯಾರ್ಥಿಗಳ ಸಂಖ್ಯೆ (1990-2004)

| ಭಾಷೆ | 1997 | 2000 | 2003 | 2005 |
|---|---|---|---|---|
| ಇಂಗ್ಲೀಷ್ | 85 | 122 | 137 | 139 |
| ಮರಾಠಿ | 138 | 160 | 81 | 138 |
| ಕೊಂಕಣಿ | 156 | 142 | 126 | 177 |

ತಖ್ತೆ 5. ಸ್ನಾತಕೋತ್ತರ (ಎಂ.ಎ) ಸ್ತರದಲ್ಲಿ ಭಾಷೆಗಳನ್ನು ಆಯ್ದುಕೊಂಡ ವಿದ್ಯಾರ್ಥಿಗಳ ಸಂಖ್ಯೆ (1990-2004)

| ಭಾಷೆ | 1994 | 1998 | 2002 | 2004 |
|---|---|---|---|---|
| ಇಂಗ್ಲೀಷ್ | 18 | 18 | 12 | 25 |
| ಮರಾಠಿ | 11 | 20 | 9 | 5 |
| ಕೊಂಕಣಿ | 34 | 41 | 12 | 18 |

(ಮೂಲ : ಸುನಪರಾಂತ್ ದೈನಿಕ, 22-28, ಏಪ್ರಿಲ್ 2005)

## V

# ಕರ್ನಾಟಕ ಮತ್ತು ಕೇರಳಗಳಲ್ಲಿ ಕೊಂಕಣಿ ಲಿಪಿ

### 33. ಇಷ್ಟರವರೆಗೆ ಕನ್ನಡ ಲಿಪಿಯ ಬಳಕೆ

ಕರ್ನಾಟಕದಲ್ಲಿ ತಮ್ಮ ಭಾಷೆಯನ್ನು ಬರೆಯಲು ಕೊಂಕಣಿಗರು ಕನ್ನಡದ ಲಿಪಿಯನ್ನು ಬಳಸಿದ್ದಾರೆಂಬುದು ನಿಜ. ಆದರೆ ಬಹಳಷ್ಟು ಕೊಂಕಣಿಗರು ತಮ್ಮ ಭಾಷೆಗೆ ದೇವನಾಗರಿಯನ್ನು ಕೂಡ ಬಳಸಿದ್ದಾರೆ. ಕೊಂಕಣಿಗೆ ದೇವನಾಗರಿ ಲಿಪಿ ಸೂಕ್ತ ಎಂದು ಅಭಿಪ್ರಾಯಪಟ್ಟ ಅಂಜೆಲೂಸ್ ಫ್ರಾನ್ಸಿಸ್ ಝೇವಿಯರ್ (13 ಮತ್ತು 14ರಲ್ಲಿ ಕೊಟ್ಟಿರುವುದನ್ನು ನೋಡಿ) ಕೊಂಕಣಿಗೆ ಕನ್ನಡದ ಲಿಪಿಯನ್ನು ಬಳಸಲು ಮೊತ್ತ ಮೊದಲಾಗಿ ಆರಂಭಿಸಿದವನು. ಆತನು ಕನ್ನಡ ಲಿಪಿಯನ್ನು ಬಳಸಿರುವುದಕ್ಕೆ ಕಾರಣಗಳು ತಿಳಿದುಬಂದಿಲ್ಲ.

### 34. ಕನ್ನಡ ಲಿಪಿಯನ್ನು ಕೊಂಕಣಿಗೆ ಬಳಸುವುದರಲ್ಲಿರುವ ಅನನುಕೂಲತೆ

(ಅ) ಕರ್ನಾಟಕದ ಹೊರಗಿನ ಕನ್ನಡ ಲಿಪಿಯ ಪರಿಚಯವಿಲ್ಲದ ಕೊಂಕಣಿಗರು ಈ ಲಿಪಿಯಲ್ಲಿ ಬರೆದ ಕೊಂಕಣಿ ಸಾಹಿತ್ಯವನ್ನು ಓದಲು/ಆನಂದಿಸಲು ಅಸಮರ್ಥರು.

(ಆ) ಭಾಷಾ ವಿಮರ್ಶಕರು ಆ ಲಿಪಿಯಲ್ಲಿ ಬರೆದ ಕೊಂಕಣಿ ಸಾಹಿತ್ಯದ ವಿವಿಧ ಆಯಾಮಗಳ ಗುಣ-ದೋಷಗಳ ಸ್ವತಂತ್ರ ಅಧ್ಯಯನವನ್ನು ಮಾಡಲಾರರು. ಅವರು ಕನ್ನಡ ಲಿಪಿಯಲ್ಲಿ ತಜ್ಞರಾದವರ ಅಭಿಪ್ರಾಯವನ್ನು ಅವಲಂಬಿಸಬೇಕಾಗಿದೆ. ಇದು ತೃಪ್ತಿಕರವಲ್ಲದ ವ್ಯವಸ್ಥೆ.

(ಇ) ಸಾಹಿತ್ಯದ ವಿದ್ವಾಂಸರು/ವಿದ್ಯಾರ್ಥಿಗಳು ಕನ್ನಡ ಲಿಪಿಯಲ್ಲಿ ಬರೆದ ಸಾಹಿತಿ/ಅವನ ಸಾಹಿತ್ಯದ ಸ್ಥಾನವನ್ನು ಕೊಂಕಣಿ ಸಾಹಿತ್ಯದ ಇತಿಹಾಸದಲ್ಲಿ ಕರಾರುವಕ್ಕಾಗಿ ನಿರ್ಧರಿಸಲಾರರು.

(ಈ) ವಿವಿಧ ಕೊಂಕಣಿ ಸಾಹಿತಿಗಳ ಬರಹದ ವಿಷಯ, ಕಥಾವಸ್ತು, ವಾಕ್ ಪ್ರಯೋಗ, ಶೈಲಿ ಇತ್ಯಾದಿಗಳ ತುಲನಾತ್ಮಕ ಅಧ್ಯಯನವನ್ನು ಕೈಗೊಳ್ಳುವ ವಿದ್ಯಾರ್ಥಿಗಳ/ವಿದ್ವಾಂಸರ ಪ್ರಯತ್ನಗಳು ಲಿಪಿಯ ಸಮಸ್ಯೆಯಿಂದಾಗಿ ಫಲಪ್ರದವಾಗಲು ಅಡ್ಡಿಯಾಗುವುದು.

(ಉ) ಯಾವುದೇ ಭಾಷೆಯ ಸಾಹಿತ್ಯದ ಅಭಿವೃದ್ಧಿಯು ಅದರ ಸಾಹಿತ್ಯಿಕ ಚಲನವಲನಗಳಿಗೆ ಬರಹಗಾರರು/ಓದುಗರು ತೋರಿಸುವ ಪ್ರತಿಕ್ರಿಯೆಯನ್ನು ಅವಲಂಬಿಸಿರುತ್ತದೆ. ಉದಾಹರಣೆಗೆ, ಪಾಶ್ಚಾತ್ಯ ಸಾಹಿತ್ಯದಲ್ಲಿ ಒಂದು ಗುಂಪಿನ ಬರಹಗಾರರ ಸಾಹಿತ್ಯ ಮುಂದಿನ ಪೀಳಿಗೆಯ ಬರಹಗಾರರ ಗ್ರಹಿಕೆಗಳ ಮೇಲೆ ಪ್ರಭಾವ ಬೀರಿದುದರಿಂದಲೇ ಅಪ್ರಾಕೃತಿಕ(metaphysical), ನವಗಂಭೀರ(neo-classicist), ಶೃಂಗಾರಮಯ(romantic), ವಾಸ್ತವಿಕ(existential) ಇತ್ಯಾದಿ ಶೈಲಿಗಳು

ಒಂದರ ನಂತರ ಇನ್ನೊಂದರಂತೆ ವಿಕಸಿತಗೊಂಡವು. ಇಂಥದ್ದೇ ಸಂವಹನ / ಪ್ರತಿಕ್ರಿಯೆಯನ್ನು ಭಾರತೀಯ ಭಾಷೆಗಳಲ್ಲೂ ಕಾಣಬಹುದು. ಈ ತೆರನಾದ ಮುಕ್ತ ಸಂವಹನ ಹಾಗೂ ವಿಚಾರ ಮತ್ತು ಶೈಲಿಗಳ ವಿಕಸನದ ಪ್ರಕ್ರಿಯೆಯು, ಬರಹಗಾರರು/ ಓದುಗರು ದೇವನಾಗರಿ ಅಥವಾ ರೋಮನ್ ಲಿಪಿಗಳಿಗೆ ಅಪರಿಚಿತರಾಗಿದ್ದು ಕೇವಲ ಕನ್ನಡ ಲಿಪಿಗೆ ಮಾತ್ರ ಆತುಕೊಂಡಿರುವುದರಿಂದ ಸಾಧ್ಯವಾಗುವುದಿಲ್ಲ.

35. **ಕೇರಳದಲ್ಲಿ ಮಲಯಾಳ ಲಿಪಿಯ ಬಳಕೆ?**

(ಅ) ಕೊಂಕಣಿಯನ್ನು ಬರೆಯಲು ಬಳಸುವ ಲಿಪಿಗಳ ಬಗ್ಗೆ ಹೇಳುವಾಗ ಕೇರಳದಲ್ಲಿ ಕೊಂಕಣಿಯನ್ನು ಮಲಯಾಳ ಲಿಪಿಯಲ್ಲಿಯೇ ಬರೆಯಲಾಗುತ್ತದೆ ಎಂಬಂತೆ ಭಾವಿಸಲಾಗುತ್ತದೆ. ಆದರೆ ಸತ್ಯಸಂಗತಿ ಹಾಗಿಲ್ಲ.

(ಆ) ಕೇರಳದಲ್ಲಿ ನಾರಾಯಣ ನರಸಿಂಹ ಪೈ, ಕಮಲಾಂಬಾಳ್, ಆರ್.ಸಿ. ಶರ್ಮ ಮೊದಲಾದವರಿಂದ ಬರೆಯಲ್ಪಟ್ಟ ಕೊಂಕಣಿ ಪುಸ್ತಕಗಳು ಮಲಯಾಳ ಲಿಪಿಯಲ್ಲಿವೆ. ಈ ಪ್ರವೃತ್ತಿ 1940ರ ತನಕ ಮಾತ್ರ ಇತ್ತು.

(ಇ) ಆದರೆ 1966ರಲ್ಲಿ ನಡೆದ ಕೊಂಕಣಿ ಚಳವಳಿಯು ಮೂಡಿಸಿದ ಅರಿವಿನ ಪರಿಣಾಮವಾಗಿ ಬರಹಗಾರರು ಕೊಂಕಣಿ ಸಾಹಿತ್ಯವನ್ನು ದೇವನಾಗರಿಯಲ್ಲಿ ಬರೆದು ಮುಖ್ಯವಾಹಿನಿಯನ್ನು ಸೇರಿಕೊಳ್ಳುವ ಅಗತ್ಯವನ್ನು ಮನಗಂಡರು ಮತ್ತು ಒಮ್ಮತದಿಂದ ದೇವನಾಗರಿಯನ್ನು ಬಳಸಲಾರಂಭಿಸಿದರು. 1966ರ ನಂತರದ ಅವಧಿಯಲ್ಲಿ ಬರೆಯಲ್ಪಟ್ಟಿರುವ ಎಲ್ಲ ಕೊಂಕಣಿ ಪುಸ್ತಕಗಳು ದೇವನಾಗರಿ ಲಿಪಿಯಲ್ಲಿ ಬರೆಯಲ್ಪಟ್ಟಿವೆ.

(ಈ) ಎಪ್ಪತ್ತರ ದಶಕದ ಆರಂಭದಲ್ಲಿ ಕೇರಳದ ಎರಡು ಪ್ರಾಥಮಿಕ ಶಾಲೆಗಳಲ್ಲಿ ಕೊಂಕಣಿಯನ್ನು ಒಂದು ಹೆಚ್ಚುವರಿ ಭಾಷೆಯಾಗಿ ಸೇರಿಸಿದಾಗ ಕೇರಳದ ವಿದ್ಯಾರ್ಥಿಗಳಿಗೂ ಗೋವಾ ಸರಕಾರದ ಶಿಕ್ಷಣ ಇಲಾಖೆ ಸಿದ್ಧಪಡಿಸಿದ ಪಠ್ಯಪುಸ್ತಕಗಳನ್ನೇ ಸ್ವೀಕರಿಸಲಾಯಿತು.

(ಉ) ದೇವನಾಗರಿ ಲಿಪಿಯನ್ನು ಅಂಗೀಕರಿಸಿದ ಪರಿಣಾಮವಾಗಿ ಕೇರಳ ಮತ್ತು ಗೋವೆಯ ಕೊಂಕಣಿ ಪುಸ್ತಕಗಳಿಗೆ ಸಾಮಾನ್ಯ ಓದುಗರ ಬಳಗ ಸಿಕ್ಕಿದೆ ಹಾಗೂ ಓದಿನ ಮತ್ತು ಸಾಹಿತ್ಯ ವಿಮರ್ಶೆಗಳ ಕ್ಷೇತ್ರಗಳಿಂದ ಲಿಪಿಯ ತಡೆಗೋಡೆ ಮಾಯವಾಗಿದೆ.

## VI
## ತಪ್ಪು ಕಲ್ಪನೆಗಳು ಮತ್ತು ವಸ್ತುಸ್ಥಿತಿ

*(ಕರ್ನಾಟಕದಲ್ಲಿ ಕೊಂಕಣಿಯನ್ನು ದೇವನಾಗರಿ ಲಿಪಿಯಲ್ಲಿ ಕಲಿಸುವ ಸೂಕ್ತತೆಯ ಬಗ್ಗೆ)*

36. **ಕೊಂಕಣಿ ಮಾತನಾಡುವ ಜನರು ಗೋವಾದಲ್ಲಿರುವುದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಕರ್ನಾಟಕದಲ್ಲಿದ್ದಾರೆ. ಆದುದರಿಂದ ಕೊಂಕಣಿಗೆ ಕನ್ನಡ ಲಿಪಿಯೇ ಸೂಕ್ತ.**

ಕರ್ನಾಟಕದಲ್ಲಿ ಗೋವಾದಲ್ಲಿರುವುದಕ್ಕಿಂತಲೂ ಹೆಚ್ಚು ಕೊಂಕಣಿ ಮಾತನಾಡುವ ಜನರಿರುವುದೇನೋ ಸತ್ಯ. ಆದರೆ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಲಿಪಿಯನ್ನು ಬಳಸಲು ಇದು ಕಾರಣವಾಗಲಾರದು. ಇಂಗ್ಲೆಂಡ್ ಮತ್ತು ಅಮೇರಿಕ - ಈ ಎರಡೂ ದೇಶಗಳ ಒಟ್ಟು

ಜನಸಂಖ್ಯೆಗಿಂತಲೂ ಹೆಚ್ಚಿನ ಸಂಖ್ಯೆಯ ಇಂಗ್ಲಿಷ್ ಮಾತನಾಡುವ ಜನರು ಇತರ ದೇಶಗಳಲ್ಲಿದ್ದಾರೆ. ಹಾಗೆಂದು ವಿಶ್ವದಲ್ಲಿ ಇಂಗ್ಲಿಷನ್ನು ವಿವಿಧ ಲಿಪಿಗಳಲ್ಲಿ ಕಲಿಯುವುದಿಲ್ಲ ಅಥವಾ ಬರೆಯುವುದಿಲ್ಲ. ಮಲೇಷ್ಯಾ, ಶ್ರೀಲಂಕಾ ಮತ್ತಿತರ ದೇಶಗಳಲ್ಲಿ ತಮಿಳು ಮಾತನಾಡುವ ಜನರು ಅಧಿಕ ಸಂಖ್ಯೆಯಲ್ಲಿದ್ದಾರೆ. ಆದರೆ ಎಲ್ಲ ಕಡೆಗಳಲ್ಲಿ ಆ ಭಾಷೆಯನ್ನು ಒಂದೇ ಲಿಪಿಯಲ್ಲಿ ಬರೆಯಲಾಗುತ್ತದೆ. ಯುರೋಪಿನ ಮತ್ತು ಅಮೇರಿಕದ ಅನೇಕ ವಿಶ್ವವಿದ್ಯಾಲಯಗಳಲ್ಲಿ ಹಿಂದಿ, ಸಂಸ್ಕೃತ ಸೇರಿದಂತೆ ಭಾರತೀಯ ಭಾಷೆಗಳನ್ನು ದೇವನಾಗರಿ ಲಿಪಿಯಲ್ಲಿಯೇ ಕಲಿಸಲಾಗುತ್ತದೆ. ಅಂತೆಯೇ ಎಲ್ಲಿಯೇ ಆಗಲಿ, ಕೊಂಕಣಿ ಬರಹಕ್ಕೆ ಒಂದೇ ಲಿಪಿ ಇರಬೇಕು.

37. **ಕರ್ನಾಟಕದಲ್ಲಿ ಕೊಂಕಣಿ ಉಳಿಯಬೇಕಾದರೆ ಅದನ್ನು ಕನ್ನಡ ಲಿಪಿಯಲ್ಲಿಯೇ ಬರೆಯಬೇಕು.**

ಇದು ಸುಳ್ಳೆಂದು ಚರಿತ್ರೆ ಸಾಬೀತುಪಡಿಸಿದೆ. ಹಿಂದಿ, ಮಲೆಯಾಳ, ಮರಾಠಿ, ಸಂಸ್ಕೃತ, ತೆಲುಗು, ಉರ್ದು ಮೊದಲಾದ ಭಾಷೆಗಳನ್ನಾಡುವ ಜನರು ಶತಮಾನಗಳಿಂದ ಕರ್ನಾಟಕದಲ್ಲಿ ವಾಸಿಸುತ್ತಿದ್ದಾರೆ. ಹೊರರಾಜ್ಯಗಳ ಮೂಲದ ಈ ಭಾಷೆಗಳನ್ನು ಅವುಗಳದ್ದೇ ಲಿಪಿಯಲ್ಲಿ ಬರೆಯಲಾಗುತ್ತದೆ ಮತ್ತು ಹಾಗಿದ್ದೂ ಅವುಗಳು ಕರ್ನಾಟಕದಲ್ಲಿ ಉಳಿದುಕೊಂಡಿವೆ. ಅವುಗಳನ್ನು ಅವುಗಳ ಸ್ವಂತ ಲಿಪಿಯಲ್ಲಿಯೇ ಕಲಿಸಲಾಗುತ್ತದೆ ಮತ್ತು ಇದನ್ನು ಕನ್ನಡ ಲಿಪಿ ವಿರೋಧಿ ಎಂದು ಯಾರೂ ಪರಿಗಣಿಸಿಲ್ಲ. ಅಂತೆಯೇ ಕೊಂಕಣಿಯು ವಿವಿಧ ರಾಜ್ಯಗಳಲ್ಲಿ ಅಸ್ತಿತ್ವದಲ್ಲಿರುವ ಭಾಷೆಯಾಗಿದೆ ಮತ್ತು ಹೊರ ರಾಜ್ಯಗಳಲ್ಲಿ ನೆಲೆಸಿರುವ ಕೊಂಕಣಿಗರೊಂದಿಗೆ ಲಿಖಿತ ರೂಪದಲ್ಲಿ ವ್ಯವಹರಿಸಲು ಅತ್ಯಂತ ಉಪಯುಕ್ತವಾದ ಲಿಪಿಯನ್ನು ಆಯ್ದುಕೊಳ್ಳಲು ಅದಕ್ಕೆ ಹಕ್ಕಿದೆ.

38. **ಕಳೆದೊಂದು ಶತಮಾನದಲ್ಲಿ ಕೊಂಕಣಿಯ ಸೃಜನಾತ್ಮಕ ಸಾಹಿತ್ಯ ಕನ್ನಡ ಲಿಪಿಯಲ್ಲಿ ಸೃಷ್ಟಿಯಾಗಿದೆ. ದೇವನಾಗರಿ ಲಿಪಿಯನ್ನು ಅಂಗೀಕರಿಸಿದರೆ ಈ ಎಲ್ಲ ಸಾಹಿತ್ಯ ನಾಶವಾಗುವುದು.**

ಇದು ಖಂಡಿತಕ್ಕೂ ನಿಜವಲ್ಲ. ಕರ್ನಾಟಕ ಶೈಕ್ಷಣಿಕ ವ್ಯವಸ್ಥೆಯಲ್ಲಿ ಕನ್ನಡವು ಕಡ್ಡಾಯವಾಗಿ ಕಲಿಯಬೇಕಾದ ಭಾಷೆಯಾಗಿದೆ. ಒಂದು ವೇಳೆ ಕೊಂಕಣಿಯನ್ನು ಒಂದು ಐಚ್ಛಿಕ ಭಾಷೆಯಾಗಿ ನಾಗರಿ ಲಿಪಿಯಲ್ಲಿ ಕಲಿಸಲು ಆರಂಭಿಸಿದರೂ ಅಥವಾ ಅದರ ನಂತರವೂ ವಿದ್ಯಾರ್ಥಿಗಳು ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಕಲಿಯುವುದನ್ನು ಮುಂದುವರಿಸುವರು. ಹೀಗೆ ಪ್ರಾದೇಶಿಕ ಭಾಷೆಯಾದ ಕನ್ನಡದ ಲಿಪಿಯು ಅವರಿಗೆ ಸುಪರಿಚಿತವೇ ಆಗಿದ್ದು, ಮುಂದಿನ ತಲೆಮಾರುಗಳ ಜನರೂ ಕನ್ನಡ ಲಿಪಿಯಲ್ಲಿ ಬರೆದ ಕೊಂಕಣಿ ಸಾಹಿತ್ಯವನ್ನು ಆನಂದಿಸಲು ಶಕ್ಯರಾಗುವರು.

39. **ಕರ್ನಾಟಕದಲ್ಲಿ ದೇವನಾಗರಿ ಲಿಪಿಯಲ್ಲಿ ಯಾವುದೇ ಕೊಂಕಣಿ ನಿಯತಕಾಲಿಕವಾಗಲೀ ಅಥವಾ ಹೇಳಿಕೊಳ್ಳುವಂತಹ ಸಾಹಿತ್ಯವಾಗಲೀ ಇಲ್ಲ. ಆದರೆ ಕನ್ನಡ ಲಿಪಿಯಲ್ಲಿ ಅನೇಕ ಕೊಂಕಣಿ ನಿಯತಕಾಲಿಕಗಳು ಪ್ರಕಟವಾಗುತ್ತಿವೆ ಮತ್ತು ಅವುಗಳು ತುಂಬ ಜನಪ್ರಿಯವಾಗಿವೆ.**

(ಅ) ನಿಯತಕಾಲಿಕಗಳ ಸಂಖ್ಯೆ ಅಥವಾ ಅವುಗಳ ಜನಪ್ರಿಯತೆಗೂ, ಶಾಲೆಗಳಲ್ಲಿ ಅ

ಭಾಷೆಯನ್ನು ಕಲಿಸುವುದಕ್ಕೂ ಯಾವುದೇ ಸಂಬಂಧವಿಲ್ಲ. ಇಂಗ್ಲಿಷ್, ಹಿಂದಿ, ಸಂಸ್ಕೃತ, ಮಲೆಯಾಳ, ತಮಿಳು, ತೆಲುಗು ಅಥವಾ ಕನ್ನಡವನ್ನೂ ಕೂಡ ಆಯಾ ಭಾಷೆಯಲ್ಲಿ ಕರ್ನಾಟಕದಲ್ಲಿ ಪ್ರಕಟವಾಗುವ ನಿಯತಕಾಲಿಕಗಳ ಸಂಖ್ಯೆಯ ಆಧಾರದಲ್ಲಿ ಅವುಗಳನ್ನು ಶಾಲೆಗಳಲ್ಲಿ ಕಲಿಸಲಾಗುವುದಿಲ್ಲ. ಓರ್ವ ವಿದ್ಯಾರ್ಥಿಗೆ ಶಿಕ್ಷಣ ಸಹಾಯಕ ಸಾಮಗ್ರಿ ಹಾಗೂ ಮಕ್ಕಳ ಸಾಹಿತ್ಯ ಅಗತ್ಯವಾಗಿದ್ದು, ದೇವನಾಗರಿಯಲ್ಲಿ ಬರೆಯಲ್ಪಟ್ಟ ಕೊಂಕಣಿಯ ವಿಪುಲ ಪುಸ್ತಕಗಳಲ್ಲಿ ಅದು ಲಭ್ಯ.

(ಆ) ಕನ್ನಡ ಲಿಪಿಯಲ್ಲಿರುವ ಕೊಂಕಣಿ ನಿಯತಕಾಲಿಕಗಳಿಗೆ ಕುತ್ತು ಬರಬಹುದೆಂಬ ಆಶಂಕೆ ನಿರಾಧಾರವಾದುದು. ಕೊಂಕಣಿಯು ನಾಗರಿ ಲಿಪಿಯಲ್ಲಿ ಕಲಿಸಲ್ಪಟ್ಟರೂ, ಎಲ್ಲಿಯವರೆಗೆ ಈ ನಿಯತಕಾಲಿಕಗಳು ಜನಪ್ರಿಯತೆಯನ್ನು ಉಳಿಸಿಕೊಂಡು ಆರ್ಥಿಕವಾಗಿ ಸುಸ್ಥಿತಿಯಲ್ಲಿರುವವೋ ಅಲ್ಲಿಯವರೆಗೆ ಅವುಗಳ ಪ್ರಕಟಣೆ ಮುಂದುವರಿಯುವುದು. ಯಾವಾಗ ಅವುಗಳ ಓದುಗರು ನಾಗರಿ ಲಿಪಿಯನ್ನು ಸ್ವೀಕರಿಸಲು ಸಿದ್ಧರಾಗುವರೋ ಆಗ ಈ ನಿಯತಕಾಲಿಕಗಳು ಕನ್ನಡ ಲಿಪಿಯ ಬದಲು ದೇವನಾಗರಿಯನ್ನು ಬಳಸಲು ಪ್ರಾರಂಭಿಸಬಹುದು.

(ಇ) ಜನಪ್ರಿಯವಾಗಿದ್ದೂ ವೃತ್ತಪತ್ರಿಕೆ/ನಿಯತಕಾಲಿಕಗಳ ಪ್ರಕಟಣೆ ನಾನಾ ಕಾರಣಗಳಿಂದಾಗಿ ನಿಂತು ಹೋಗಬಹುದು. ಇದಕ್ಕೆ 'ದಿ ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ' ವಾರಪತ್ರಿಕೆ ನಿಂತುಹೋದುದೇ ಸಾಕ್ಷಿ. ಕೊಂಕಣಿಯ '*ಕೊಂಕಣಿ ದಿರ್ವೆಂ*' ಮತ್ತು 'ಪೊಯ್ನಾರಿ'ಯಂತಹ ಅನೇಕ ಜನಪ್ರಿಯ ಕೊಂಕಣಿ ಪತ್ರಿಕೆಗಳು ದೇವನಾಗರಿಯ ಯಾವ ಪ್ರಭಾವವೂ ಇಲ್ಲದೆಯೇ ತಮ್ಮ ಪ್ರಕಟಣೆಯನ್ನು ನಿಲ್ಲಿಸಿದವು.

**40. ಮುಂಬೈಯಲ್ಲಿ ಕೂಡ ಜನರು ದೇವನಾಗರಿಯಲ್ಲಿರುವ ಕೊಂಕಣಿ ನಿಯತಕಾಲಿಕ/ ಪುಸ್ತಕಗಳನ್ನು ಓದುವುದಿಲ್ಲ, ಆದರೆ ಕನ್ನಡ ಲಿಪಿಯಲ್ಲಿರುವ ಪತ್ರಿಕೆಗಳನ್ನು ಓದುತ್ತಾರೆ.**

ಇದು ನಿಜವಲ್ಲ. ದೇವನಾಗರಿಯಲ್ಲಿ ಬರೆಯಲ್ಪಟ್ಟ ಕೊಂಕಣಿ ಪುಸ್ತಕಗಳು ಕನ್ನಡ ಲಿಪಿಯಲ್ಲಿ ಬರೆದವುಗಳಷ್ಟೇ ಚೆನ್ನಾಗಿ ಮಾರಾಟವಾಗುತ್ತವೆ.

ಯಾವುದೇ ಭಾಷೆಯಲ್ಲಿ ತುಂಬ ಜನಪ್ರಿಯತೆ ಪಡೆದಿರುವ ಪುಸ್ತಕ ಮತ್ತು ಪತ್ರಿಕೆಗಳೂ ಇರುತ್ತವೆ ಮತ್ತು ಅಷ್ಟೊಂದು ಜನಪ್ರಿಯತೆ ಪಡೆಯದವುಗಳೂ ಇರುತ್ತವೆ. ಒಂದು ಪುಸ್ತಕ ಅಥವಾ ಪತ್ರಿಕೆಯ ಜನಪ್ರಿಯತೆಯು ಅದರ ವಿಷಯ, ಅದು ಯಾವ ಓದುಗರ ಗುಂಪನ್ನು ಲಕ್ಷ್ಯವಾಗಿರಿಸಿಕೊಂಡಿದೆಯೋ ಅವರ ಅಭಿರುಚಿ, ಪ್ರಕಾಶಕರ ದಕ್ಷತೆ, ಆರ್ಥಿಕ ಸಾಮರ್ಥ್ಯ, ಮಾರಾಟ ಹಾಗೂ ವಿತರಣಾ ವ್ಯವಸ್ಥೆ ಇತ್ಯಾದಿ ವಿವಿಧ ಅಂಶಗಳನ್ನು ಅವಲಂಬಿಸಿದೆ.

ಒಂದು ಪುಸ್ತಕ ಅಥವಾ ಒಂದು ಪತ್ರಿಕೆ ಹೆಚ್ಚಿನ ಸಂಖ್ಯೆಯಲ್ಲಿ ಮಾರಾಟವಾಗುತ್ತದೆ ಎನ್ನುವುದು ಅದರ ಅಥವಾ ಅದು ಒಳಗೊಂಡಿರುವ ವಿಷಯದ ಉತ್ಕೃಷ್ಟತೆಗೆ ಸಾಕ್ಷಿಯಾಗಲಾರದು. ವಿಶೇಷವಾದ ವಿಷಯವನ್ನೊಳಗೊಂಡಿರುವ ಪುಸ್ತಕಗಳು/ಪತ್ರಿಕೆಗಳು ವಿಶೇಷ ಅಭಿರುಚಿ ಇರುವ ವಾಚಕವೃಂದದವರಿಗಾಗಿ ಪ್ರಕಟಿಸಲ್ಪಡುತ್ತವೆ ಮತ್ತು ಗಂಭೀರವಾದ, ಚಿಂತನೆಗೆ ಹಚ್ಚುವ ವಿಷಯುಗಳನ್ನೊಳಗೊಂಡಿರುವ ಓದಿನ ಸಾಮಾಗ್ರಿಗಳು ಅವುಗಳ ವಿಶೇಷತೆಯಿಂದಾಗಿ ಗಮನಕ್ಕೆ ಬಾರದಿರುವಂತಹ ಸಂಭವ ಹೆಚ್ಚು. ಜನಪ್ರಿಯ ಪುಸ್ತಕ ಹಾಗೂ ವೃತ್ತಪತ್ರಿಕೆಗಳತ್ತ ಒಂದು ದೃಷ್ಟಿ ಹಾಯಿಸಿದರೆ ಅವುಗಳ ವಿಷಯಗಳು ಹೆಚ್ಚಾಗಿ ಕಚಗುಳಿ

ಇಡುವಂತಹ, ರೋಮಾಂಚನಗೊಳಿಸುವಂತಹ, ಮನೋರಂಜನೆಯನ್ನೊದಗಿಸುವ ಭಾವೋದ್ರೇಕದ ವಿಷಯಗಳಾಗಿರುವುದು ಕಂಡು ಬರುತ್ತದೆ. ದೇವನಾಗರಿ ಲಿಪಿಯಲ್ಲಿರುವ ಕೊಂಕಣಿ ವೃತ್ತಪತ್ರಿಕೆಗಳು ಹಾಗೂ ಪುಸ್ತಕಗಳು ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಅಭಿರುಚಿ ಇರುವ ವಾಚಕವೃಂದವನ್ನು ತಮ್ಮ ಗುರಿಯನ್ನಾಗಿಸಿವೆ.

41. **ಕೆಥೋಲಿಕರು ಕನ್ನಡ ಲಿಪಿಯಲ್ಲಿ ಬರೆದಿರುವ ಕೊಂಕಣಿ ಸಾಹಿತ್ಯ ವಿಪುಲವಾಗಿದೆ.**

ಯಾವುದೇ ರಾಜ್ಯದಲ್ಲಿರುವ ಕೊಂಕಣಿಗರಿಗೆ ಯಾವುದೇ ಸಮಯದಲ್ಲಿ ಓದಲು, ಆನಂದಿಸಲು, ಅಧ್ಯಯನ ಹಾಗೂ ಸಂಶೋಧನೆಯನ್ನು ನಡೆಸಲು ಅನುಕೂಲವಾಗುವಂತೆ ಈ ಸಾಹಿತ್ಯವನ್ನು ಸಂರಕ್ಷಿಸಬೇಕಾಗಿದೆ. ಕರ್ನಾಟಕದಿಂದ ಹೊರಗಿರುವ ಕೊಂಕಣಿಗರಿಗೆ ಲಿಪಿಯ ಸಮಸ್ಯೆಯಿಂದಾಗಿ ಈ ಸಾಹಿತ್ಯವು ಅಲಭ್ಯವಾಗಿದೆ ಮತ್ತು ಪರಿಣಾಮ ಸ್ವರೂಪ ಈ ಸಾಹಿತ್ಯದ ಗುಣಾವಗುಣಗಳ ಮೌಲ್ಯಮಾಪನವಾಗಿಲ್ಲ. ಲಿಪ್ಯಂತರಕ್ಕೆ ಬೇಕಾಗುವ ಶಕ್ತಿ, ಸಮಯ ಮತ್ತು ಸಂಪನ್ಮೂಲಗಳ ದೃಷ್ಟಿಯಿಂದ ಬೃಹತ್ ಪ್ರಮಾಣದ ಸಾಹಿತ್ಯವನ್ನು ಲಿಪ್ಯಂತರಗೊಳಿಸುವುದು ಸಾಧ್ಯವಾಗುವುದಿಲ್ಲ. ಇಂತಹ ಅತೃಪ್ತಿಕರ ಪರಿಸ್ಥಿತಿ ಭವಿಷ್ಯದಲ್ಲಿ ದೇವನಾಗರಿ ಲಿಪಿಯನ್ನು ಬಳಸುವುದಕ್ಕೆ ಹೆಚ್ಚಿನ ಒತ್ತು ನೀಡುತ್ತದೆ.

42. **ಬರಹಗಾರರು ಮತ್ತು ಸಾಮಾನ್ಯ ಜನರೂ ಸೇರಿದಂತೆ ಕೊಂಕಣಿಗರಿಗೆ ಕನ್ನಡ ಲಿಪಿ ಎಷ್ಟು ಪರಿಚಿತವೋ ಅಷ್ಟೇ ದೇವನಾಗರಿ ಲಿಪಿ ಪರಿಚಿತವಲ್ಲ.**

ನಾಗರಿ ಲಿಪಿಯಲ್ಲಿ ಕೊಂಕಣಿಯನ್ನು ವಿದ್ಯಾರ್ಥಿಗಳಿಗೆ ಕಲಿಸಲು ಸಲಹೆ ನೀಡಲಾಗಿದೆಯೇ ವಿನಃ ವಯಸ್ಕ ಬರಹಗಾರ ಅಥವಾ ಇತರ ಸಾಮಾನ್ಯ ಜನರಿಗಲ್ಲ.

ಯಾವುದೇ ಭಾಷೆ ಅಥವಾ ಲಿಪಿಯನ್ನು ಕಲಿಕೆ ಹಾಗೂ ಭಾಷಾ ಅಭ್ಯಾಸಗಳ ಪ್ರಕ್ರಿಯೆಯ ಮೂಲಕ ರೂಢಿಸಿಕೊಳ್ಳಲಾಗುತ್ತದೆ ಮತ್ತು ಶೈಕ್ಷಣಿಕ ವ್ಯವಸ್ಥೆಯಲ್ಲಿ ಈ ಪ್ರಕ್ರಿಯೆಯು ಅತ್ಯುತ್ತಮ ಪರಿಣಾಮ ನೀಡುತ್ತದೆ ಮಾತ್ರವಲ್ಲ, ಈ ಕ್ರಮವು ಬಾಲ್ಯದ ಆರಂಭಿಕ ಅವಧಿಯಲ್ಲಿ ಅತ್ಯಂತ ಫಲಕಾರಿ. ಆದುದರಿಂದಲೇ ಕೊಂಕಣಿಯ ಕಲಿಕೆಗೆ ದೇವನಾಗರಿ ಲಿಪಿಯನ್ನು ಸೂಚಿಸಿರುವುದು.

ಕರ್ನಾಟಕದ ಈಗಿನ ಬರಹಗಾರರು ಹಾಗೂ ಜನಸಾಮಾನ್ಯರಿಗೆ ಕೊಂಕಣಿಯನ್ನು ನಾಗರಿ ಲಿಪಿಯಲ್ಲಿ ಓದುವ, ಬರೆಯುವ ಅಭ್ಯಾಸವಿಲ್ಲದುದರಿಂದ ಅವರಿಗೆ ನಾಗರಿ ಲಿಪಿಯು ಒಂದು ಅನನುಕೂಲವಾಗಬಹುದು. ಆದರೆ ಇದೇ ಅನನುಕೂಲತೆಯನ್ನು ಮುಂದಿನ ಪೀಳಿಗೆಗೂ ಹಸ್ತಾಂತರಿಸುವುದು ಸಮಂಜಸವಾಗಲಾರದು.

43. **ಕನ್ನಡ ಲಿಪಿಯಲ್ಲಿ ಬಹಳಷ್ಟು ಕೊಂಕಣಿ ಓದಿನ ಸಾಮಾಗ್ರಿಗಳು ಲಭ್ಯವಿರುವುದರಿಂದ ವಿದ್ಯಾರ್ಥಿಗಳಿಗೆ ಕೊಂಕಣಿಯನ್ನು ಕನ್ನಡ ಲಿಪಿಯಲ್ಲಿ ಕಲಿಸಿದರೆ ಆ ಲಿಪಿಯಲ್ಲಿರುವ ಸಾಹಿತ್ಯವನ್ನೋದಲು ಅವರಿಗೆ ಅನುಕೂಲವಾಗುವುದು.**

ದೇವನಾಗರಿ ಲಿಪಿಯ ಕೊಂಕಣಿಯಲ್ಲಿ ಎಷ್ಟು ಓದಿನ ಸಾಮಾಗ್ರಿ ಲಭ್ಯವಿವೆಯೆಂಬುವನ್ನು ಅರಿಯದಿರುವುದರಿಂದಲೇ ಇಂತಹ ತಪ್ಪು ಕಲ್ಪನೆ ಉಂಟಾಗಿದೆ. ದೇವನಾಗರಿಯಲ್ಲಿ ಕೊಂಕಣಿ ಕಲಿಯುವ ಮಕ್ಕಳಿಗೆ ಕೊಂಕಣಿ-ಕೊಂಕಣಿ, ಇಂಗ್ಲಿಷ್-ಕೊಂಕಣಿ ಮತ್ತು ಕೊಂಕಣಿ-ಇಂಗ್ಲಿಷ್ ನಿಘಂಟುಗಳು, ವ್ಯಾಕರಣ ಪುಸ್ತಕಗಳು, ಭಾಷಾ-ಅಭ್ಯಾಸ ಪುಸ್ತಕಗಳು ಹಾಗೂ ಇನ್ನಿತರ ಸಾಹಿತ್ಯ ಲಭ್ಯವಿವೆ. ಮಕ್ಕಳ ಪುಸ್ತಕಗಳ ಸಂಖ್ಯೆ ಹಾಗೂ ಅಂತಹ ಪುಸ್ತಕಗಳ ವಿಷಯ ವೈವಿಧ್ಯ ತ್ವರಿತಗತಿಯಲ್ಲಿ ಹೆಚ್ಚುತ್ತಿದೆ.

**44. ಮಕ್ಕಳು ಕನ್ನಡವನ್ನು ಮೊದಲು ಕಲಿಯುತ್ತಾರೆ ಮತ್ತು ಈ ಭಾಷೆಯ ಕಲಿಕೆ 10ನೇ ತರಗತಿಯ ವರೆಗೆ ಕಡ್ಡಾಯವಾಗಿದೆ. ಆದುದರಿಂದ ಕೊಂಕಣಿಗೆ ಕನ್ನಡ ಲಿಪಿಯೇ ವ್ಯಾವಹಾರಿಕವಾಗಿ ಹೆಚ್ಚು ಸೂಕ್ತವಾಗಿದೆ.**

ಒಂದು ಭಾಷೆಯನ್ನು ಒಂದು ನಿರ್ದಿಷ್ಟ ಲಿಪಿಯ ಮೂಲಕ ಕಲಿಯುವುದರ ಬಗ್ಗೆ ಇರುವ ಗೊಂದಲದಿಂದ ಇಂತಹ ಅಭಿಪ್ರಾಯ ವ್ಯಕ್ತವಾಗಿದೆ. ಕನ್ನಡವು ಶಾಲೆಗಳಲ್ಲಿ ಕಡ್ಡಾಯ ಎಂಬ ಮಾತ್ರಕ್ಕೆ ಕರ್ನಾಟಕದಲ್ಲಿ ಭಾಷಾ ಕಲಿಕೆಗೆ ಇತರ ಲಿಪಿಗಳನ್ನು ಹೊರತುಪಡಿಸಿಲ್ಲ.

ಇತರ ಭಾಷೆಗಳ ಕಲಿಕೆಗೆ ಕನ್ನಡ ಲಿಪಿಯು 'ವ್ಯಾವಹಾರಿಕವಾಗಿ ಸೂಕ್ತ' ಎಂದಾದರೆ ಹಿಂದಿ ಮತ್ತು ಇಂಗ್ಲಿಷ್‌ಗಳನ್ನು ಕಲಿಯಲು ಕೂಡ ಅದನ್ನೇ ಏಕೆ ಬಳಸಬಾರದು? ವಿವಿಧ ಭಾಷೆಗಳನ್ನು ಒಂದೇ ಲಿಪಿಯಲ್ಲಿ ಕಲಿಯುವ 'ವ್ಯಾವಹಾರಿಕತೆ'ಯನ್ನು ಶಿಕ್ಷಣ ತಜ್ಞರು ಅನುಮೋದಿಸುವುದಿಲ್ಲ. ಆದುದರಿಂದಲೇ ಹಿಂದಿಯು ದೇವನಾಗರಿಯಲ್ಲಿ ಕಲಿಸಲ್ಪಟ್ಟರೆ, ಇಂಗ್ಲಿಷ್ ರೋಮನ್ ಲಿಪಿಯಲ್ಲಿ ಕಲಿಸಲ್ಪಡುತ್ತದೆ. ಕೊಂಕಣಿಗೂ ತನ್ನದೇ ಆದ ಸೂಕ್ತ ಲಿಪಿ-ದೇವನಾಗರಿ ಇರಬಹುದು ಮಾತ್ರವಲ್ಲ, ಇರಲೇ ಬೇಕು.

**45. ಎಲ್ಲ ಬೋಧಕರು ಮತ್ತು ಹೆತ್ತವರು ಕನ್ನಡ ಲಿಪಿಯನ್ನು ಬಲ್ಲವರಾಗಿರುವುದರಿಂದ ಮಕ್ಕಳು ಒಂದೇ ಲಿಪಿಯಲ್ಲಿ ಎರಡು ಭಾಷೆಗಳನ್ನು (ಕೊಂಕಣಿ ಮತ್ತು ಕನ್ನಡ) ಕಲಿಯಲು ಸಾಧ್ಯವಾಗುವಂತೆ ಕೊಂಕಣಿಯನ್ನು ಕನ್ನಡ ಲಿಪಿಯಲ್ಲಿಯೇ ಕಲಿಸಬೇಕು.**

(ಅ) ಮಕ್ಕಳು ಒಟ್ಟಿಗೆ ಮೂರು ಭಾಷೆಗಳನ್ನು (ಇಂಗ್ಲಿಷ್, ಹಿಂದಿ ಮತ್ತು ಕನ್ನಡ) ಮೂರು ವಿವಿಧ ಲಿಪಿಗಳಲ್ಲಿ ಕಲಿಯುತ್ತಿರುವುದರಿಂದ ಈ ತರ್ಕ ನಿಲ್ಲುವುದಿಲ್ಲ.

(ಆ) ಕೊಂಕಣಿಯು ಒಂದು ಐಚ್ಛಿಕ ಭಾಷೆಯಾಗಿ ಪಠ್ಯಕ್ರಮದಲ್ಲಿ ಸೇರಿಸಲ್ಪಟ್ಟಾಗ ಅದು ಹಿಂದಿ ಅಥವಾ ಸಂಸ್ಕೃತದ ಸ್ಥಾನವನ್ನು ಆಕ್ರಮಿಸುತ್ತದೆಯೇ ಹೊರತು ಕನ್ನಡ ಅಥವಾ ಇಂಗ್ಲಿಷಿನ ಸ್ಥಾನವನ್ನಲ್ಲ. ಕೊಂಕಣಿಯನ್ನು ಕನ್ನಡ ಲಿಪಿಯಲ್ಲಿ ಕಲಿಸುವುದರಿಂದ ಈಗ ಹಿಂದಿ ಅಥವಾ ಸಂಸ್ಕೃತದ ಕಲಿಕೆಯಿಂದಾಗಿ ಇನ್ನೊಂದು ರಾಷ್ಟ್ರೀಯ ಲಿಪಿಯಾದ ದೇವನಾಗರಿಯನ್ನು ಕಲಿಯುವ ವಿದ್ಯಾರ್ಥಿಯು, ಆ ಸದವಕಾಶದಿಂದ ವಂಚಿತನಾಗುತ್ತಾನೆ.

**46. ದೇವನಾಗರಿ ಲಿಪಿಯು ಮಗುವಿಗೆ 10 ವರ್ಷವಾದಾಗ ಕಲಿಸಲ್ಪಡುತ್ತದೆ ಮತ್ತು ಇದರಿಂದಾಗಿ ಅದು ಕನ್ನಡ ಅಥವಾ ರೋಮನ್ ಲಿಪಿಯಷ್ಟು ಜನಪ್ರಿಯವಾಗಿಲ್ಲ.**

**ಅಥವಾ**

**ಮಕ್ಕಳು 10ನೇ ತರಗತಿಗೆ ಹೋಗುವುದರೊಳಗೆ ಹಿಂದಿ ಭಾಷೆಯನ್ನೂ, ದೇವನಾಗರಿ ಲಿಪಿಯನ್ನೂ ಇಷ್ಟಪಡುವುದಿಲ್ಲ. ಇಷ್ಟವಿಲ್ಲದೆ ಕಲಿತದ್ದು ಸುಲಭವಾಗಿ ಮರೆತು ಹೋಗುತ್ತದೆ (ದೇವನಾಗರಿಯನ್ನು ಕೊಂಕಣಿಗೆ ಅಳವಡಿಸಿದಲ್ಲಿ ಅದರ ಗತಿಯೂ ಹೀಗೆಯೇ ಆಗಬಹುದು).**

ಮಗುವಿಗೆ ಹತ್ತು ವರ್ಷವಾದ ನಂತರವೇ ಅದು ದೇವನಾಗರಿಯ ಅಕ್ಷರಮಾಲೆಯನ್ನು ಕಲಿಯುತ್ತದೆ ಎಂಬುದು ನಿಜ. ಆದರೆ ದೇವನಾಗರಿ ಲಿಪಿಯು ಜನಪ್ರಿಯವಲ್ಲ ಎಂಬುದಕ್ಕೆ

ಯಾವ ಆಧಾರವೂ ಇಲ್ಲ. ಸಾವಿರಾರು ವಿದ್ಯಾರ್ಥಿಗಳು (ಕೊಂಕಣಿ ವಿದ್ಯಾರ್ಥಿಗಳೂ ಸೇರಿದಂತೆ) ಈ ಲಿಪಿಯಲ್ಲಿ ಭಾಷೆಗಳನ್ನು ಕಲಿಯುತ್ತಾರೆ ಮಾತ್ರವಲ್ಲ, ಅದರೊಂದಿಗೆ ಸಂಬಂಧ ಹೊಂದಿದ ಲಿಪಿ ಹಾಗೂ ಭಾಷೆಗಳೆರಡರಲ್ಲಿಯೂ ಪರಿಣತಿಯನ್ನು ಸಾಧಿಸುತ್ತಾರೆ.

## VII
## ಪರಿಸಮಾಪ್ತಿ

(ಅ) ಕೊಂಕಣಿಯನ್ನು ವಿವಿಧ ಲಿಪಿಗಳಲ್ಲಿ ಬರೆಯುವುದು ಆ ಭಾಷೆಯನ್ನಾಡುವ ಇಡೀ ಸಮುದಾಯಕ್ಕೆ ತುಂಬ ಜಟಿಲವಾದ ಸಮಸ್ಯೆಯನ್ನು ಸೃಷ್ಟಿಸಿದೆ ಎಂಬುದು ಮೇಲೆ ಚರ್ಚಿಸಲ್ಪಟ್ಟ ವಿಷಯಗಳಿಂದ ಸ್ಪಷ್ಟವಾಗಿದೆ.

(ಆ) ಕೊಂಕಣಿ ಸಾಹಿತ್ಯದ ಈಗಿನ ಎಲ್ಲ ಗಂಭೀರ ಬರಹಗಾರರು, ಪ್ರಕಾಶಕರು, ಓದುಗರು, ವಿದ್ಯಾರ್ಥಿಗಳು ಹಾಗೂ ವಿದ್ವಾಂಸರು ಅನುಭವಿಸುತ್ತಿರುವ ಲಿಪಿ ವೈವಿಧ್ಯದ ತಡೆಗೋಡೆಯನ್ನು ತೊಡೆದುಹಾಕಲು ಕೊಂಕಣಿಗೆ ಒಂದು ಸಾಮಾನ್ಯ ಲಿಪಿಯ ಅಗತ್ಯವಿದೆ.

(ಇ) ಭಾರತೀಯ ಭಾಷೆಯ ಅಕ್ಷರಗಳ ಉಚ್ಚಾರಕ್ಕೆ ದೇವನಾಗರಿಯು ಅತ್ಯಂತ ಸೂಕ್ತವಾದ ಲಿಪಿಯಾಗಿದೆ ಮತ್ತು ರೋಮನ್ ಲಿಪಿಯೊಡನೆ ಹೋಲಿಸಿದರೆ ಕೊಂಕಣಿಯ ಯಾವುದೇ ಶಬ್ದದ ಉಚ್ಚಾರದಲ್ಲಿ ತೀರ ಕಡಿಮೆ ವ್ಯತ್ಯಾಸವನ್ನುಂಟು ಮಾಡುವಂತಹುದಾಗಿದೆ.

(ಈ) ಆದುದರಿಂದ ಕೊಂಕಣಿಗೆ ಬೇಕಾಗಿರುವ ಸಾಮಾನ್ಯ ಲಿಪಿಯಾಗಿ ದೇವನಾಗರಿ ಅತ್ಯಂತ ಯೋಗ್ಯವಾಗಿದೆ.

(ಉ) ಎಲ್ಲ ಕೊಂಕಣಿಗರನ್ನು ಲಿಖಿತ ಭಾಷೆಯ ಮೂಲಕ ಒಂದುಗೂಡಿಸಲು ಹಾಗೂ ಭವಿಷ್ಯದಲ್ಲಿ ಈ ಭಾಷೆಯನ್ನು ಪ್ರಮಾಣಭೂತವಾಗಿಸಲು ಕೊಂಕಣಿ ಮಾತನಾಡುವ ಎಲ್ಲ ವರ್ಗಗಳ ಜನರು ದೇವನಾಗರಿಯನ್ನು ಕ್ರಮೇಣ ಸಾಮಾನ್ಯ ಲಿಪಿಯಾಗಿ ಅಂಗೀಕರಿಸುವುದಗತ್ಯ.

(ಊ) ಈ ಉದ್ದೇಶಕ್ಕಾಗಿ ಪ್ರಸಕ್ತ ಗೋವಾದಲ್ಲಿ ಮಾಡುತ್ತಿರುವಂತೆ ಮಕ್ಕಳಿಗೆ ಕೊಂಕಣಿಯು ದೇವನಾಗರಿ ಲಿಪಿಯಲ್ಲಿ ಶೈಕ್ಷಣಿಕ ಸಿದ್ಧಾಂತಗಳಿಗೆ ಅನುಗುಣವಾಗಿ ಕಲಿಸಲ್ಪಡಬೇಕು.

(ಋ) ದೇವನಾಗರಿಯಲ್ಲಿ ಕೊಂಕಣಿಯನ್ನು ಪರಿಚಯಿಸುವುದರ ಮೂಲಕ ಹಾಗೂ ವಿವಿಧ ಪ್ರದೇಶಗಳಲ್ಲಿ ಕೊಂಕಣಿಗರು ದೇವನಾಗರಿ ಲಿಪಿಯನ್ನು ಅಂಗೀಕರಿಸಿದುದರಿಂದ ಕಳೆದ ಎರಡು ದಶಕಗಳಲ್ಲಿ ಈ ಭಾಷೆಯು ಉತ್ತಮ ಪ್ರಗತಿಯನ್ನು ಸಾಧಿಸಿದೆ. ಈ ಲಾಭಗಳನ್ನು ಎಲ್ಲ ಪ್ರದೇಶಗಳಲ್ಲಿ, ಶಿಕ್ಷಣ ಹಾಗೂ ಲಿಖಿತ ರೂಪದಲ್ಲಿ ಭಾಷೆಯನ್ನು ಬಳಸುವ ಇನ್ನಿತರ ಕ್ಷೇತ್ರಗಳಲ್ಲಿ ಒಂದುಗೂಡಿಸಬೇಕಾಗಿದೆ.

--------

proof to show that Nagari script is not popular. Hundreds of thousands of students (including Konkani students) learn languages in this script and gain mastery over the use of both the script and the languages associated with it.

## VII
## CONCLUSION

(i) From the issues discussed above, it is crystal clear that writing Konkani in several scripts has resulted in a very complex problem for the entire community speaking the language.

(ii) The language needs a common script, to cross the barrier of scripts experienced at present by all serious writers, publishers, readers, students and scholars of Konkani literature.

(iii) Devanagari, is best suited to represent the sounds of an Indian language and, compared to Roman script, causes least distortion in the pronunciation of any word in Konkani.

(iv) Therefore, Devanagari is the most suitable script to meet the need of a common script for Konkani.

(v) Devanagari as a common script needs to be gradually adopted by various sections of the Konkani speaking people, for bringing all the Konkanis together through the medium of written language and for standardization of the language in future.

(vi) For this purpose, the children shall be taught Konkani in Devanagari, according to the principles of education, as is being done in Goa at present.

(vii) Due to introduction of Konkani in Devanagari and the adoption of the script by Konkanis of various regions, the language has made remarkable progress during the past 2 decades. These gains need to be consolidated, in all regions, both in the fields of education and other aspects of using the language in a written form.

---

